RNI No. KARKAN/2007/22111 ಸಂಪುಟ 13 ಸಂಚಿಕೆ 5 ಜನವರಿ 2019

₹ 20/-



ಐಹಿಕ ಮತ್ತು ಪಾರತ್ರಿಕ ವಿಜಯದ ಹಾದಿ

الصراط المستقيم

# ಸಿರಾತೇ ಮುಸ್ತಖೀಮ್

ಜಮೀಯತೇ ಅಹ್ಲೆ ಹದೀಸ್ ಕರ್ನಾಟಕ-ಗೋವಾ ಇದರ ಮುಖವಾಣಿ

ಸತ್ಯವಿಶ್ವಾಸಿಗಳ ಕೈಪಿಡಿ



# ಹಾಡು ಮತ್ತು ಸಂಗೀತ

ಕುರ್‌ಆನ್ ಮತ್ತು ಸುನ್ನತ್ತಿನ ಬೆಳಕಿನಲ್ಲಿ

## ಮಹಾತ್ಮರೊಂದಿಗೆ ಏಕೆ ಪ್ರಾರ್ಥಿಸಬಾರದು?



# الصراط المستقيم

ಐಹಿಕ ಮತ್ತು ಪಾರತ್ರಿಕ ವಿಜಯದ ಹಾದಿ

# ಸಿರಾತೇ ಮುಸ್ತಖೀಮ್

ಸತ್ಯವಿಶ್ವಾಸಿಗಳ ಕೈಪಿಡಿ


ಸಂಪುಟ 13 ಸಂಚಿಕೆ 05

جمادى الأولى ١٤٤٠ هـ

**ಜನವರಿ 2019**

*ಮಾಲಕರು, ಮುದ್ರಕರು ಮತ್ತು ಪ್ರಕಾಶಕರು:*

**ಮುಹಮ್ಮದ್ ಅಲಿ**

ದಾವಾ ಪಬ್ಲಿಕೇಶನ್ಸ್,
ಹಿರಾ ಕಾಂಪ್ಲೆಕ್ಸ್,
ಡೋರ್ ನಂ. 2-184/11,
2 ನೇ ಬ್ಲಾಕ್, ಕಾಟಿಪಳ್ಳ ಪೋಸ್ಟ್,
ಮಂಗಳೂರು - 575 030

*ಸಂಪಾದಕರು:*

**ಪಿ. ಅಬ್ದುಸ್ಸಲಾಂ ಕಾಟಿಪಳ್ಳ**

Mob: 9986282449
Email: asshahadat@yahoo.co.in

*ಮುಖಪುಟ ವಿನ್ಯಾಸ:*

**ಎ.ಎಸ್ಕೆ.**

*ಮುದ್ರಣ:*

Akshara Printers,
2nd Block, Katipalla,
Mangaluru. D.K.


## ಒಳಪುಟಗಳಲ್ಲಿ

### ಸಂಪಾದಕೀಯ



### ಈ ಸಂಚಿಕೆಯಲ್ಲಿ



### ಸ್ಥಿರ ಶೀರ್ಷಿಕೆಗಳು




Printed, published & owned by Muhammad Ali, Dawa Publications, Hira Complex, 2-184/11, 2nd Block, Katipalla Post, Mangaluru - 575 030. Editor: P. Abdussalam, Printed at: Akshara Printers, 2nd Block, Katipalla Post, Mangaluru. D. K. KARNATAKA




بسم الله الرحمن الرحيم

الحَمْدُ لِلّٰهِ رَبِّ العَالَمِينَ الصَّلَاةُ وَالسَّلَامُ عَلَى أَفْضَلِ الأَنْبِيَاءِ وَالمُرْسَلِينَ
وَعَلَى آلِهِ وَصَحْبِهِ أَجْمَعِينَ أَمَّا بَعْدُ

# ಪರಿಧಿಯಿಲ್ಲದ ಆಸೆಗಳು ಮತ್ತು ಪರಿಧಿಯಿರುವ ಜೀವನ

ಮನುಷ್ಯನು ಬಾಲ್ಯದಿಂದ ಮರಣದ ತನಕ ತೀರದ ಆಸೆಗಳಿಗೆ ಅಧೀನನಾಗಿದ್ದಾನೆ. ಮನುಷ್ಯನ ಈ ಆರದ ಆಸೆಗಳಿಗೆ ಉದಾಹರಣೆಯಾಗಿ ಪ್ರವಾದಿ(ﷺ) ಯವರು ಹೇಳುತ್ತಾರೆ.

“ಮನುಷ್ಯನಿಗೆ ಚಿನ್ನದ ಒಂದು ಕಣಿವೆ ಲಭಿಸಿದರೆ ಮತ್ತೊಂದು ಬೇಕೆಂದು ಆಸೆಪಡುತ್ತಾನೆ. ಮಣ್ಣಲ್ಲದೆ ಅವನ ಬಾಯಿ ತುಂಬುವುದಿಲ್ಲ. ಪಶ್ಚಾತ್ತಾಪಪಡುವವನ ಪಶ್ಚಾತ್ತಾಪವನ್ನು ಅಲ್ಲಾಹನು ಸ್ವೀಕರಿಸುತ್ತಾನೆ. (ಮರಣದೊಂದಿಗೆ ಮಾತ್ರ ಮನುಷ್ಯನ ಆಸೆ ಕೊನೆಗೊಳ್ಳುತ್ತದೆ.)” (ಬುಖಾರಿ ಮುಸ್ಲಿಮ್)

ಈ ವಚನವು ಮನುಷ್ಯನ ಅನಂತ ಆಸೆಗಳ ಕುರಿತು ವಿವರಣೆ ಅಗತ್ಯವಿಲ್ಲದ ರೀತಿಯಲ್ಲಿ ತಿಳಿಸಿಕೊಡುತ್ತದೆ. ಕೊಲೆಪಾತಕ, ಉಗ್ರವಾದ, ಮದ್ಯಪಾನ, ವ್ಯಭಿಚಾರ, ಸ್ವಂತ ಮಾತಾಪಿತರೊಡನೆ ಕ್ರೌರ್ಯ, ಸ್ವಂತ ಮಕ್ಕಳ ಹತ್ಯೆ ಮುಂತಾದವುಗಳಿಗೆ ಹಲವೊಮ್ಮೆ ಮನುಷ್ಯನನ್ನು ಪ್ರೇರೇಪಿಸುವುದು ಅದುಮಿಡಲಾಗದಂತಹ ಲೌಕಿಕ ಮೋಹಗಳಾಗಿವೆ.

ಇದು ಮನುಷ್ಯನನ್ನು ಏಕದೇವಾರಾಧನೆ ಹಾಗೂ ಬಹುದೇವಾರಾಧನೆಯೆಡೆಗೆ ಕೊಂಡೊಯ್ಯಲು ಕಾರಣವಾಗಲೂಬಹುದು. ಅದು ಹೇಗೆ? ವಿವರಿಸೋಣ. ಒಬ್ಬನು ಹಲವು ಶಕ್ತಿಗಳು ಮತ್ತು ವ್ಯಕ್ತಿಗಳನ್ನು ಕರೆದು ಪ್ರಾರ್ಥಿಸುತ್ತಿದ್ದ. ಅವನು ಮಾರಕ ರೋಗಗಳಿಗೆ ತುತ್ತಾದ. ನುರಿತ ತಜ್ಞರಿಗೆ ಮುಂದೇನೂ ಮಾಡಲು ಸಾಧ್ಯವಾಗದು. ಮದ್ದುಗಳಿಂದ ಪ್ರಯೋಜನವಿಲ್ಲವೆಂದು ತಿಳಿದ ಸಮಯದಿಂದ ಅನುರಣವು ಆ ವ್ಯಕ್ತಿಯ ಕಣ್ಮುಂದೆ ಸುಳಿದಾಡುತ್ತದೆ. ಆ ಹೊತ್ತಿನಲ್ಲಿ ಅವರ ಯೋಜನೆಯಲ್ಲಿ ಪೂಜಿಸಲ್ಪಡುವ ಯಾವುದೇ ಸೃಷ್ಟಿಗಳಿಲ್ಲ.

ಈ ಸಂಕಷ್ಟದ ಸಮಯದಲ್ಲಿ ಅವರಲ್ಲಿ ಯಾರಿಗೂ ತನ್ನನ್ನು ರಕ್ಷಿಸಲು ಸಾಧ್ಯವಾಗದು ಎಂಬ ಸತ್ಯ ಆ ವ್ಯಕ್ತಿಗೆ

ಗೊತ್ತಿತ್ತು. ಅವರ ಹೃದಯದಿಂದ ತನ್ನ ಆಯುಷ್ಯವನ್ನು ಸ್ವಲ್ಪ ಮುಂದೂಡಲು ಹಾಗೂ ತನ್ನ ಅಸಹಾಯಕತೆ-ಯನ್ನು ದೂರಗೊಳಿಸುವಂತೆ ಕೋರುವ ಪ್ರಾರ್ಥನೆ ಮೊಳಗುತ್ತದೆ. ಸೃಷ್ಟಿಕರ್ತನೊಡನೆ ಮಾತ್ರವಿರುವ ಯಾಚನೆ ಆಯುಷ್ಯಾವಧಿ ವರ್ಧಿಸಬೇಕೆನ್ನುವ ಮನುಷ್ಯನನ್ನು ಏಕದೇವಾರಾಧನೆಯೆಡೆಗೆ ಸಾಗಿಸುತ್ತದೆ ಎಂದರ್ಥ.

ದಾಂಪತ್ಯ ಜೀವನದಲ್ಲಿ ಹಲವು ವರ್ಷಗಳು ಕಳೆದು ಹೋದರೂ ಒಂದು ಮಗುವಿನ ಮುಖದರ್ಶನದ ಭಾಗ್ಯ ಲಭಿಸಿಲ್ಲ. ಪ್ರಾರ್ಥನೆ ಪ್ರಯೋಜನಕಾರಿಯಾಗುವುದಿಲ್ಲ. ಇಂತಹ ಸಮಯದಲ್ಲಿ ಒಂದು ದರ್ಗಕ್ಕೆ ಹೋದರೆ ಅಥವಾ ಮಹಾತ್ಮರ ಬಳಿಗೆ ತೆರಳಿ ದುಃಖವನ್ನು ತೋಡಿಕೊಂಡರೆ ಮಗು ಹುಟ್ಟಲೂಬಹುದು. ಈ ರೀತಿಯಲ್ಲಿ ಹಲವರಿಗೆ ಭಾಗ್ಯ ಲಭಿಸಿರುವುದು ನನಗೆ ಗೊತ್ತಿದೆ. ಆ ವ್ಯಕ್ತಿಯ ಯೋಚನೆ ಹೀಗೆ ಹರಿಯತೊಡಗುತ್ತದೆ. ಕೊನೆಗೆ ಸಂತಾನ ದಯಪಾಲಿಸುವ ಸಾಮರ್ಥ್ಯವಿರುವಂತಹ ಸೃಷ್ಟಿಕರ್ತನನ್ನು ತೊರೆದು ಸೃಷ್ಟಿಗಳಲ್ಲಿ ನಿರೀಕ್ಷೆಯನ್ನಿಟ್ಟುಕೊಂಡು ಪ್ರಾರ್ಥನೆ ಸಲ್ಲಿಸುತ್ತಾನೆ. ಸಂತಾನದ ಅಭಿಲಾಷೆಯು ಅವನನ್ನು ಮುಶ್ರಿಕನನ್ನಾಗಿ ಮಾಡುತ್ತದೆ.

ಆರ್ಥಿಕ ಮೋಹಗಳು ಮನುಷ್ಯನನ್ನು ಹಂತಕನನ್ನಾಗಿ ಮಾಡುವುದಕ್ಕೆ ಉದಾಹರಣೆಗಳನ್ನು ನೀಡಬೇಕಾದ ಅಗತ್ಯ-ವಿಲ್ಲ. ಅದು ಈ ದಿನಗಳಲ್ಲಿ ಅಷ್ಟು ವ್ಯಾಪಕವಾಗಿ ಮಾರ್ಪಟ್ಟಿದೆ.

ಸತ್ಯದ ಮುಖವನ್ನು ವಿಕೃತವಾಗಿ ಪ್ರಸ್ತುತಪಡಿಸಿ ಇದುವೇ ಸತ್ಯವೆಂದು ಬಿಂಬಿಸುವವರು ಹಾಗೂ ಆ ವಿಕೃತವಾದ ಆಶಯದ ಅಭಿವೃದ್ಧಿಗೆ ಯಾವ ಕೆಳಮಟ್ಟಿಕ್ಕಿಳಿಯಲೂ ಹೇಸದವರು ಉಗ್ರವಾದಿಗಳು ಮತ್ತು ಭಯೋತ್ಪಾದಕ-ರಾಗುತ್ತಾರೆ. ನಾಯಕತ್ವವನ್ನು ಅನುಸರಿಸಿ ಅವರು ಹೇಳುತ್ತಿರುವುದೆಲ್ಲ ಸರಿ ಎಂದು ಭಾವಿಸಿ ಆತ್ಮಹತ್ಯಾ ದಳಕ್ಕೆ ಸೇರುವವರು ಬಯಸುವುದು ಹುತಾತ್ಮತೆಯಾಗಿರಬಹುದು ಅಥವಾ ತಮ್ಮ ಮರಣದ ಮೂಲಕವಾದರೂ ಕುಟುಂಬವು ಹಸಿವು ಬಡತನದಿಂದ ಮುಕ್ತವಾಗಲಿ ಎಂಬ ಆಗ್ರಹವಾಗಿರಬಹುದು.

ಜೀವನದಲ್ಲಿ ಆಸೆಗಳು ನೆರವೇರಿಸಲ್ಪಡದಿರುವಾಗ ಮತ್ತು ಇದ್ದುದರಲ್ಲಿ ಸಂತುಷ್ಟರಾಗದಿರುವಾಗ ಹಲವರು ಮದ್ಯ ಮತ್ತಿತರ ಅಮಲು ಪದಾರ್ಥಗಳಲ್ಲಿ ಅಭಯ ಪಡೆಯುತ್ತಾರೆ.

ಲೈಂಗಿಕ ತೃಷೆಯನ್ನು ಶಮನಗೊಳಿಸುವ ಆಗ್ರಹವು ಹಲವರನ್ನು ಲೈಂಗಿಕ ಅರಾಜಕತೆಯೆಡೆಗೆ ಸಾಗಿಸಿದೆ. ಸ್ತ್ರೀ--ಪುರುಷರ ಸಂಬಂಧಗಳಿಗೆ ನಿಯಂತ್ರಣ ಅಗತ್ಯವಿಲ್ಲವೆಂದು ಅವರು ವಾದಿಸುತ್ತಾರೆ. ಕೊನೆಗೆ ಅವನು ಅಥವಾ ಅವಳು ಸಮಾಜದ ಮುಂದೆ ಅಪಮಾನಿತನಾಗುತ್ತಾನೆ. ಕೆಟ್ಟ ಹೆಸರು ಸಂಪಾದಿಸಿ ರೋದಿಸುತ್ತಾರೆ. ಇವುಗಳಿಗೆಲ್ಲ ಕಾರಣ ಮಿತಿಮೀರಿದ ಆಸೆಗಳಾಗಿವೆ.

ವಾಸ್ತವದಲ್ಲಿ ಜೀವನವು ಚಿಕ್ಕ ಅವಧಿಯಲ್ಲಿ ಕೊನೆಗೊಳ್ಳುತ್ತದೆ. ಮನುಷ್ಯನು ಜೀವನದಲ್ಲಿ ಗಳಿಸಿದ್ದೆಲ್ಲವನ್ನೂ ಬಿಟ್ಟು ಹೋಗಬೇಕಾಗಿದೆ. ಅದರ ನಡುವೆ ಸಂಪಾದಿಸಿದ ಪದವಿ, ಸ್ಥಾನಮಾನಗಳು, ಮನೆ, ವಾಹನ ಮುಂತಾದವುಗಳು ಮಧ್ಯಂತರ ಅನುಕೂಲತೆಗಳು ಮಾತ್ರ. ಆದರೂ ಮನುಷ್ಯನು ನೆರೆಹೊರೆಯ ಭೂಮಿಯ ಒತ್ತುವರಿ, ಕಳ್ಳ ವ್ಯಾಪಾರ, ಕಾಳಸಂತೆ, ಭ್ರಷ್ಟಾಚಾರ, ಲಂಚದ ಮೂಲಕ ಮತ್ತಷ್ಟು ಗಳಿಸಲು ಶ್ರಮಿಸುತ್ತಾರೆ. ಇದರ ಹಿಂದಿರುವುದು ಐಷಾರಾಮದ ಜೀವನದ ಆಸೆ.

ಪತ್ನಿಯ ಶಾಂತಿ--ಸಮಾಧಾನವನ್ನು ಮಾತ್ರ ಬಯಸಿ ಆಕೆಯ ತಲೆದಿಂಬಿನ ಗೊಣಗಾಟಕ್ಕೆ ಬಲಿಯಾಗಿ ಅಥವಾ ಬೇರೆ ಯಾವುದಾದರೂ ಭೌತಿಕ ಹಿತಾಸಕ್ತಿಗಾಗಿ ಒಂಬತ್ತು ತಿಂಗಳು ಗರ್ಭ ಹೊತ್ತು ಹೆತ್ತು ಸಾಕಿ ಸಲಹಿದ ಮತ್ತು ಅದಕ್ಕಾಗಿ ತನ್ನ ಪ್ರಾಣವನ್ನೇ ಪಣವಿಟ್ಟ ತಾಯಿ ಹಾಗೂ ಅವನ ಜನನ ಮೊದಲ್ಗೊಂಡು ಪ್ರತಿಯೊಂದು ದಿನವೂ ಅವನ ಏಳಿಗೆಯನ್ನು ಬಯಸಿ ತನ್ನ ಕೈಲಾದುದನ್ನು ಮಾಡಿದ ತಂದೆಯನ್ನು ಬೀದಿಗೆ ಅಟ್ಟುವ ಅಥವಾ

ವೃದ್ಧಾಶ್ರಮಕ್ಕೆ ಸೇರಿಸುವವರ ಸಂಖ್ಯೆ ವರ್ಧಿಸುತ್ತಿದೆ.

ವಿವಾಹವಾಗಿ ಹೆಚ್ಚು ಕಾಲ ಕಳೆಯುವುದಕ್ಕಿಂತ ಮುಂಚೆಯೇ ಪತ್ನಿ ಗರ್ಭಿಣಿಯಾದರೆ ಇನ್ನಷ್ಟು ಸಮಯ 'ಸಮಾಧಾನ'ದಿಂದ ಜೀವಿಸಲು ಪತ್ನಿಯ ಒಪ್ಪಿಗೆಯಿಂದಲೇ ಗರ್ಭಾಶಯದಲ್ಲಿರುವ ಮಗುವನ್ನು ಕೊಲ್ಲುವುದರ ಹಿಂದೆಯೂ ಆಸೆ ಎಂಬ ರಕ್ಕಸನಿದ್ದಾನೆ.

ಎಲ್ಲಾ ಆಸೆಗಳಿಗೆ ತಣ್ಣೀರೆರಚುವ, ಆಸೆಗಳ ಹಿಂದೆ ಓಡಾಡಿಕೊಂಡಿರು ಮಧ್ಯೆ ಯಾವ ಕ್ಷಣವೂ ಮರಣವು ಬಂದೆರಗಬಹುದು.




"ಪ್ರತಿಯೊಂದು ಸಮುದಾಯಕ್ಕೂ ಒಂದು ಕಾಲಾವಧಿ ನಿಶ್ಚಿತವಿದೆ. ಅದರ ಕಾಲಾವಧಿಯು ಮುಗಿದಾಗ ಒಂದು ಕ್ಷಣ ಹಿಂದೆ ಅಥವಾ ಮುಂದೆ ಆಗುವುದಿಲ್ಲ." (ಅಲ್‌ರಾಫ್ 34)

ಸುನಾಮಿ, ಭೂಕಂಪ, ಚಂಡಮಾರುತ, ನೆರೆ ಮುಂತಾದ ಪ್ರಾಕೃತಿಕ ವಿಪತ್ತುಗಳು ಅದೆಷ್ಟು ಜನರನ್ನು ಬಲಿತೆಗೆದುಕೊಳ್ಳುತ್ತಿದೆ. ಮಾರಕರೋಗ ಹಾಗೂ ಅಪಘಾತಗಳಿಂದ ಹಲವಾರು ಜನರು ನಮ್ಮಿಂದ ಅಗಲಿದ್ದಾರೆ.

ಅವರಲ್ಲಿ ಯಾರಿದ್ದರು? ಕುಟುಂಬದ ಒಂದು ಹೊತ್ತಿನ ಅನ್ನಕ್ಕಾಗಿ ನೆತ್ತಿ ಸುಡುವ ಬಿಸಿಲಲ್ಲಿ ಬೆವರು ಹರಿಸಿದವರು, ಮಗಳ ಪ್ರಾಯ ಕಳೆದರೂ ವಿವಾಹ ಮಾಡಿಕೊಡಲು ಸಾಧ್ಯವಾಗದೆ ದುಃಖದಿಂದ ದಿನಕಳೆಯುತ್ತಿದ್ದವರು, ತಾನಿಲ್ಲಿ ಶಾಶ್ವತನೆಂದು ಬಗೆದು ಸಂಪತ್ತನ್ನು ಕೂಡಿಟ್ಟವರು ರಾತ್ರಿ ಹಗಲು ಓಡಾಡಿ ಸೃಷ್ಟಿಕರ್ತನ ಏಕತ್ವದ ಕುರಿತು ಬೋಧನೆ ನೀಡಿದವರು! ಹೀಗೆ ಅದೆಷ್ಟೋ ಜನರು ಪ್ರಕೃತಿ ವಿಕೋಪಕ್ಕೆ ಬಲಿಯಾಗಿದ್ದಾರೆ.

ನಮಗೆ ಪರಿಚಿತರಾದವರು, ನಮ್ಮ ಪರಿಚಯವಿರುವವರು, ಕುಟುಂಬಕ್ಕೆ ಒಳಪಟ್ಟವರು, ಸಂಬಂಧಿಕರು, ಆದರ್ಶದಲ್ಲಿ ನಮ್ಮೊಂದಿಗೆ ಕೈಜೋಡಿಸಿ ಕಾರ್ಯವೆಸಗಿದವರು ನಮ್ಮಿಂದ ಅಗಲಿರುವುದನ್ನು ನಾವು ಕಾಣುತ್ತಿದ್ದೇವೆ.

ಒಂದು ದಿನ ನಾವೂ ಈ ಲೋಕಕ್ಕೆ ವಿದಾಯಕೋರಲೇ ಬೇಕಾಗಿದೆ. ಆ ಪ್ರಯಾಣಕ್ಕೆ ಅಗತ್ಯವಿರುವ ಸಾಧನ ಸರಂಜಾಮುಗಳನ್ನು ಸಜ್ಜುಗೊಳಿಸುವ ನಿಟ್ಟಿನಲ್ಲಿ ನಾವು ಯಶಸ್ವಿಯಾಗಿದ್ದೇವೆಯೇ? ಯೋಚಿಸಿರಿ. ಶಿರ್ಕ್‌ನಿಂದ ಸಂಪೂರ್ಣ ಮುಕ್ತರಾಗಿರಿ. ಎಲ್ಲಾ ಅನುಗ್ರಹಗಳನ್ನು ದಯಪಾಲಿಸಿದ ಸೃಷ್ಟಿಕರ್ತನೆಡೆಗೆ ಮರಳಿರಿ. ಅನಾಚಾರಗಳನ್ನು ತೊರೆದು ಪ್ರವಾದಿ(ﷺ)ಯವರ ಚರ್ಯೆಯನ್ನು ಸ್ವೀಕರಿಸಿರಿ. ಅಕ್ರಮ, ಅನ್ಯಾಯ, ದರೋಡೆ, ಹತ್ಯೆ, ಉಗ್ರವಾದ, ಭಯೋತ್ಪಾದನೆ, ಕೋಮುವಾದ, ಕೋಪ, ಮತ್ಸರ, ಹಗೆ, ಮುಂತಾದ ಕೆಡುಕುಗಳು ಶಾಂತಿಗೆ ಮಾರಕವಾಗಿದೆ. ಎಲ್ಲಾ ವಿಧದ ಕೆಡುಕುಗಳನ್ನು ತೊರೆದು ಪರಸ್ಪರ ಪ್ರೀತಿ, ಕರುಣೆ, ಅನುಕಂಪ, ದಯೆ, ಮುಂತಾದ ಸದ್ಗುಣಗಳ ವಕ್ತಾರರಾಗಿ ಮಾರ್ಪಟ್ಟರೆ ಈ ಲೋಕ ಮತ್ತು ಪರಲೋಕದಲ್ಲಿ ಶಾಂತಿ ಲಭಿಸುತ್ತದೆ.

ಮರಣವು ಬಂದೆರಗುವುದಕ್ಕಿಂತ ಮೊದಲು ಅಲ್ಲಾಹನು ದಯಪಾಲಿಸಿದ ಐದು ಅನುಗ್ರಹಗಳನ್ನು ಸದುಪಯೋಗಪಡಿಸಿಕೊಳ್ಳಬೇಕು. ಆ ಐದು ಅನುಗ್ರಹಗಳು ಯಾವುದೆಂದರೆ ವೃದ್ಧಾಪ್ಯಕ್ಕೆ ಮೊದಲಿನ ಯೌವನ, ರೋಗಕ್ಕೆ ಮೊದಲಿನ ಆರೋಗ್ಯ, ಬಡತನಕ್ಕೆ ಮೊದಲಿನ ಶ್ರೀಮಂತಿಕೆ, ಕೆಲಸದಲ್ಲಿ ಮಗ್ನರಾಗುವುದಕ್ಕೆ ಮೊದಲಿನ ಬಿಡುವು ಹಾಗೂ ಮರಣಕ್ಕೆ ಮೊದಲಿನ ಜೀವನ. (ನಸಾಈ) ■




ಋತುಸ್ರಾವ | كتاب الحيض

### ಅಧ್ಯಾಯ 1

## ಋತುಸ್ರಾವವಿರುವ ಸ್ತ್ರೀಯರು (ಹಜ್ಜ್ ನಿರ್ವಹಣೆಯ ಸಂದರ್ಭದಲ್ಲಿ) ಏನು ಮಾಡಬೇಕು?

٢٠٣- عَـنْ عَائِشَـةَ رَضِـيَ اللَّـهُ عَنْهَـا قَالَتْ: خَرَجْنَـا لَا نَـرَى إِلَّا الْحَـجَّ. فَلَمَّـا كُنَّا بِسَـرِفَ حِضْتُ. فَدَخَلَ عَلَيَّ رَسُـولُ اللَّـهِ صَلَّى اللَّهُ عَلَيْهِ وَسَـلَّمَ وَأَنَـا أَبْكِي. قَـالَ: «مَا لَكِ؟ أَنُفِسْـتِ؟» قُلْتُ: نَعَـمْ. قَـالَ: إِنَّ هَذَا أَمْـرٌ كَتَبَهُ اللَّـهُ عَلَى بَنَـاتِ آدَمَ. فَاقْضِـي مَا يَقْضِـي الْحَـاجُّ غَيْرَ أَنْ لَا تَطُوفِـي بِالْبَيْـتِ». قَالَـتْ: وَضَحَّى رَسُـولُ اللَّـهِ صَلَّى اللَّـهُ عَلَيْهِ وَسَـلَّمَ عَنْ نِسَـائِهِ بِالْبَقَرِ.

[رواه البخـاري ٢٩٤]

203. ಆಯಿಶಾ(ರ) ವರದಿ ಮಾಡುತ್ತಾ ಹೇಳುತ್ತಾರೆ. ನಾವೆಲ್ಲರೂ ಹಜ್ಜ್ ನಿರ್ವಹಿಸುವ ಉದ್ದೇಶದಿಂದ ಮದೀನ ಮುವ್ವರದಿಂದ ಹೊರಟೆವು. ಪುಣ್ಯ ಸ್ಥಳಕ್ಕೆ ತಲುಪುವಷ್ಟರಲ್ಲಿ ನನಗೆ ಋತುಸ್ರಾವ ಉಂಟಾಯಿತು. ಪ್ರವಾದಿ(ಸ) ರವರು ನನ್ನ ಬಳಿಗೆ ಬಂದರು. ನಾನು ಅಳುತ್ತಿದ್ದೆ. ಅವರು(ಸ) ಹೇಳಿದರು. "ಏನಿದು ನಿನ್ನ ಅವಸ್ಥೆ? ನಿನಗೆ ಋತುಸ್ರಾವ ಉಂಟಾಗಿದೆಯೇ?" ನಾನು ಹೇಳಿದೆ. "ಹೌದು" ಪ್ರವಾದಿ(ಸ) ಹೇಳಿದರು, "ಈ ಪ್ರಕ್ರಿಯೆಯಂತೂ ಅಲ್ಲಾಹು ಆದಮ್(ಅ) ರವರ ಪುತ್ರಿಯರಿಗೆ ವಿಧಿಸಿದ್ದೇ ಆಗಿದೆ. ಆದ್ದರಿಂದ ಕಅ್‌ಬಾಲಯದ ತವಾಫ್ ಒಂದನ್ನು ಬಿಟ್ಟು ಹಾಜಿಗಳು ನಿರ್ವಹಿಸುವ ಎಲ್ಲಾ ಕಾರ್ಯಗಳನ್ನೂ ನಿರ್ವಹಿಸು." ಆಯಿಶಾ(ರ) ಹೇಳುತ್ತಾರೆ, ಪ್ರವಾಗಿ(ಸ) ತನ್ನ ಪತ್ನಿಯರ ಪರವಾಗಿ ಒಂದು ದನ ಕುರ್ಬಾನಿ ಮಾಡಿದರು.

**ಸಾರಾಂಶ :** ಋತುಸ್ರಾವ (ಹೈದ್) ಇರುವ ಸ್ತ್ರೀಯರು ಬೈತುಲ್ಲಾಹ್ ತವಾಫ್ ಒಂದನ್ನು ಹೊರತುಪಡಿಸಿ ಹಜ್ಜ್‌ಗೆ ಸಂಬಂಧಿಸಿದ ಉಳಿದ ಎಲ್ಲಾ ಕಾರ್ಯಗಳನ್ನು ನಿರ್ವಹಿಸಬಹುದೆಂದು ಇಲ್ಲಿ ಸ್ಪಷ್ಟವಾಗುತ್ತದೆ.

## ಅಧ್ಯಾಯ 2

# ಋತುಸ್ರಾವವಿರುವ ಸ್ತ್ರೀ ತನ್ನ ಪತಿಯ ತಲೆಯನ್ನು ತೊಳೆಯುವುದು ಮತ್ತು ಬಾಚುವುದು

٢٠٤- وَعَنْهَا رَضِيَ اللَّهُ عَنْهَا قَالَتْ: كُنْتُ أُرَجِّلُ رَأْسَ رَسُولِ اللَّهِ صَلَّى اللَّهُ عَلَيْهِ وَسَلَّمَ وَأَنَا حَائِضٌ. [رواه البخاري ٢٩٥]

204. ಆಯಿಶಾ(ﵩ) ರವರೇ ವರದಿ ಮಾಡಿರುವ ಇನ್ನೊಂದು ಹದೀಸಿನಲ್ಲಿ ಅವರು ಹೇಳುತ್ತಾರೆ, "ನಾನು ಋತುಸ್ರಾವದ ಸ್ಥಿತಿಯಲ್ಲಿ ಅಲ್ಲಾಹನ ಸಂದೇಶವಾಹಕರ ಪವಿತ್ರವಾದ ತಲೆಯನ್ನು ಬಾಚುತ್ತಿದ್ದೆ."

**ಸಾರಾಂಶ :** ಇಲ್ಲಿ ಸ್ಪಷ್ಟವಾಗುವುದೇನೆಂದರೆ ಋತುಸ್ರಾವದ ಸಂದರ್ಭದಲ್ಲಿ ಸ್ತ್ರೀಯರು ಮನೆಗೆಲಸಗಳನ್ನೂ, ಪತಿಯ ಸೇವೆಯನ್ನೂ ನಿರ್ವಹಿಸಬಹುದು.

٢٠٥- وَفِي رِوَايَةٍ: وَهُوَ مُجَاوِرٌ فِي الْمَسْجِدِ يُدْنِي لَهَا رَأْسَهُ وَهِيَ فِي حُجْرَتِهَا فَتُرَجِّلُهُ وَهِيَ حَائِضٌ. [رواه البخاري ٢٩٦]

205. ಆಯಿಶಾ(ﵩ) ವರದಿ ಮಾಡಿರುವ ಇನ್ನೊಂದು ಹದೀಸಿನಲ್ಲಿ ಹೀಗಿದೆ. ಪ್ರವಾದಿ(ﷺ) ಮಸೀದಿಯಲ್ಲಿ ಕುಳಿತುಕೊಂಡು ಅವರ ತಲೆಯನ್ನು ಇವರ ಕಡೆಗೆ ಚಾಚುತ್ತಿದ್ದರು. ಆಗ ಇವರು ಋತುಸ್ರಾವದ ಸ್ಥಿತಿಯಲ್ಲಿದ್ದರೂ ಅವರ ಕೋಣೆಯೊಳಗೆ ಇದ್ದುಕೊಂಡು ಅವರ ತಲೆ ಬಾಚುತ್ತಿದ್ದರು.

## ಅಧ್ಯಾಯ 3

# ಪುರುಷರು ಋತುಸ್ರಾವದ ಸ್ಥಿತಿಯಲ್ಲಿರುವ ಪತ್ನಿಯ ಮಡಿಲಲ್ಲಿ (ದಿಂಬನ್ನಿಟ್ಟು) ಕುರ್‌ಆನ್ ಪಾರಾಯಣ ಮಾಡುವುದು

٢٠٦- وَعَنْهَا رَضِيَ اللَّهُ عَنْهَا قَالَتْ: أَنَّ النَّبِيَّ صَلَّى اللَّهُ عَلَيْهِ وَسَلَّمَ كَانَ يَتَّكِئُ فِي حَجْرِي وَأَنَا حَائِضٌ ثُمَّ يَقْرَأُ الْقُرْآنَ. [رواه البخاري ٢٩٧]

206. ಆಯಿಶಾ(ﵩ) ರವರೇ ವರದಿ ಮಾಡಿರುವ ಇನ್ನೊಂದು ಹದೀಸಿನಲ್ಲಿ ಅವರು ಹೇಳುತ್ತಾರೆ, "ಪ್ರವಾದಿ(ﷺ) ರವರು ನನ್ನ ಮಡಿಲಲ್ಲಿ ದಿಂಬನ್ನು ಇಡುತ್ತಿದ್ದರು. ಆಗ ನಾನು ಋತುಸ್ರಾವದ ಸ್ಥಿತಿಯಲ್ಲಿರುತ್ತಿದ್ದೆ. ಬಳಿಕ ಅವರು ಕುರ್‌ಆನ್ ಪಾರಾಯಣ ಮಾಡುತ್ತಿದ್ದರು."

**ಸಾರಾಂಶ :** ಋತುಸ್ರಾವದ ಸ್ಥಿತಿಯಲ್ಲಿ ಸ್ತ್ರೀಯರು ಮತ್ತು ಜನಾಬತ್ ಸ್ಥಿತಿಯಲ್ಲಿರುವ ಪುರುಷರು ಕುರ್‌ಆನ್ ಸ್ಪರ್ಶಿಸಬಾರದು. ಇಲ್ಲಿ ಅವರ ಮಡಿಲಲ್ಲಿ ದಿಂಬನ್ನಿಟ್ಟು ಕುರ್‌ಆನ್ ಪಾರಾಯಣ ಮಾಡುವ ಪ್ರಸ್ತಾಪವಿದೆ. ■

# ಹಾಡು ಮತ್ತು ಸಂಗೀತ—ಕುರ್‌ಆನ್ ಮತ್ತು ಸುನ್ನತ್ತಿನ ಬೆಳಕಿನಲ್ಲಿ

ವಿವಾಹ ಸಂದರ್ಭದಲ್ಲಿ ಹಾಡುವುದಕ್ಕೆ ಪ್ರವಾದಿಯವರು(ﷺ) ರಿಯಾಯಿತಿ ನೀಡಿರುವುದು ಒಂದು ಸುಪರಿಚಿತ ಉದ್ದೇಶಕ್ಕಾಗಿದೆ. ಆದ್ದರಿಂದ ಸ್ಪಷ್ಟ ಪುರಾವೆಯ ಆಧಾರದಲ್ಲಲ್ಲದೆ ಅದಲ್ಲದ ಬೇರೆ ಉದ್ದೇಶಕ್ಕಾಗಿ ಹಾಡುವುದಕ್ಕೆ ಅನುಮತಿಯಿಲ್ಲ ಎಂದು ಇದು ಸೂಚಿಸುತ್ತದೆ. ಉದಾಹರಣೆಗೆ, ಪ್ರಯಾಣದಲ್ಲಿರುವವನಿಗೆ ನಾಲ್ಕು ರಕ್‌ಅತ್ ನಮಾಝನ್ನು ಎರಡು ರಕ್‌ಅತ್‌ಗಳಾಗಿ ನಿರ್ವಹಿಸಲು ರಿಯಾಯಿತಿ ನೀಡಲಾಗಿದೆ. ಈ ರಿಯಾಯಿತಿಯು ಪ್ರಯಾಣದಲ್ಲಿಲ್ಲದವರಿಗೆ ನಾಲ್ಕು ರಕ್‌ಅತ್ ನಮಾಝನ್ನು ಎರಡು ರಕ್‌ಅತ್‌ಗಳಾಗಿ ನಿರ್ವಹಿಸಲು ಅನುಮತಿಯಿಲ್ಲ ಎನ್ನುವುದಕ್ಕೆ ಪುರಾವೆಯಾಗಿದೆ. ಅದೇ ರೀತಿ ಋತುಸ್ರಾವ ಮತ್ತು ಹೆರಿಗೆಯಾದವರು ತವಾಫುಲ್ ವದಾಅನ್ನು ತೊರೆಯುವುದಕ್ಕೆ ರಿಯಾಯಿತಿ ನೀಡಲಾಗಿದೆ. ಈ ರಿಯಾಯಿತಿಯು ಋತುಸ್ರಾವ ಮತ್ತು ಹೆರಿಗೆಯಾಗದವರಿಗೆ ತವಾಫುಲ್ ವದಾಅನ್ನು ತೊರೆಯುವುದಕ್ಕೆ ಅನುಮತಿಯಿಲ್ಲ ಎನ್ನುವುದಕ್ಕೆ ಪುರಾವೆಯಾಗಿದೆ.

✍ ಶೈಖ್ ಅಬ್ದುಲ್ ಅಝೀಝ್ ಇಬ್ನ್ ಅಬ್ದುಲ್ಲಾಹ್ ಇಬ್ನ್ ಬಾಝ್

ಅರ್ರಾಇದ್ ಎಂಬ ಪತ್ರಿಕೆಯ 67–68ನೇ ಸಂಚಿಕೆಗಳಲ್ಲಿ ಅಬೂ ತುರಾಬ್ ಅಝ್ಝಾಹಿರೀ ಎಂಬ ವ್ಯಕ್ತಿ **"ಹಾಡುವುದನ್ನು, ಸಂಗೀತೋಪಕರಣಗಳ ಬಳಕೆಯನ್ನು ಮತ್ತು ಅದನ್ನು ಆಲಿಸುವುದನ್ನು ಕುರ್‌ಆನ್ ಮತ್ತು ಸುನ್ನತ್ ನಿಷಿದ್ಧವೆಂದು ಹೇಳಿಲ್ಲ"** ಎಂಬ ಶೀರ್ಷಿಕೆಯಲ್ಲಿ ಬರೆದ ಒಂದು ಲೇಖನವನ್ನು ನೋಡಿದೆ.

ಹಾಡು ಮತ್ತು ಸಂಗೀತೋಪಕರಣಗಳು ಧರ್ಮಸಮ್ಮತವೆಂದು ಹೇಳುವುದಕ್ಕೆ ಅವರು ಈ ಲೇಖನದಲ್ಲಿ ತಮ್ಮ ಇಮಾಮರಾದ ಅಬೂ ಮುಹಮ್ಮದ್ ಇಬ್ನ್ ಹಝ್ಮ್ ಅಝ್ಝಾಹಿರೀ ಯವರನ್ನು ಅನುಕರಿಸಿ ಉಲ್ಲೇಖಿಸಿದ ಹದೀಸ್, ಅಸರ್ ಮುಂತಾದ ಅವರು ಅವಲಂಬಿಸಿದ ಪುರಾವೆಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ನೋಡಿದೆ.

ತಮ್ಮ ಇಮಾಮರಾದ ಅಬೂ ಮುಹಮ್ಮದ್‌ರನ್ನು ಅನುಕರಿಸಿ ಹಾಡು ಹಾಗೂ ಸಂಗೀತೋಪಕರಣಗಳು ನಿಷಿದ್ಧವೆಂಬ ವಿಷಯದಲ್ಲಿ ವರದಿಯಾದ ಸರ್ವ ಹದೀಸ್‌ಗಳನ್ನೂ ದುರ್ಬಲವೆಂದು ಹೇಳುವ ಇವರ ಕಠೋರ ಧೈರ್ಯವನ್ನು ಕಂಡು ನಾನು ದಂಗಾಗಿ ಹೋದೆ! ಮಾತ್ರವಲ್ಲ, ಇದಕ್ಕಿಂತಲೂ ಕೊಳಕಾದುದನ್ನೂ ಅವರು ಮಾಡಿದ್ದಾರೆ. ಅದೇನೆಂದರೆ ಈ ವಿಷಯದಲ್ಲಿ ವರದಿಯಾದ ಹದೀಸ್‌ಗಳು ಮೌದೂಅ್ (ನಿರ್ಮಿತ) ಎಂದು ಇವರು ಹೇಳಿರುವುದು! ಹಾಡು ಹಾಗೂ ಸಂಗೀತೋಪಕರಣಗಳನ್ನು ವಿರೋಧಿಸುವ ಆಯತ್‌ಗಳು, ಹದೀಸ್‌ಗಳು ಮತ್ತು ಸಲಫುಸ್ಸಾಲಿಹ್‌ಗಳಿಂದ ವರದಿಯಾದ ಅಸರ್‌ಗಳು ಅತ್ಯಧಿಕ ಸಂಖ್ಯೆಯಲ್ಲಿದ್ದೂ ಸಹ ಅವೊಂದನ್ನೂ ಲೆಕ್ಕಿಸದೆ ಹಾಡು ಹಾಗೂ ಸಂಗೀತೋಪಕರಣಗಳು ನಿಷಿದ್ಧವಲ್ಲವೆಂದು ಹೇಳುವ ಇವರಿಬ್ಬರ (ಇವರ ಮತ್ತು ಇವರ ಇಮಾಮರ) ಅಸಾಮಾನ್ಯ ಕಠೋರ ಧೈರ್ಯವನ್ನು ಕಂಡು ನನಗೆ ನಿಜಕ್ಕೂ ಅಚ್ಚರಿಯಾಗುತ್ತಿದೆ.

ಅಲ್ಲಾಹನ ಹೆಸರಲ್ಲಿ ಅರಿವಿಲ್ಲದೆ ಮಾತನಾಡುವುದರ ಬಗ್ಗೆ, ಅಲ್ಲಾಹು ನಿಷಿದ್ಧಗೊಳಿಸಿದ್ದನ್ನು ಆಧಾರರಹಿತವಾಗಿ ಧರ್ಮಸಮ್ಮತವೆಂದು ಹೇಳುವುದರ ಬಗ್ಗೆ ನಾವು ಅಲ್ಲಾಹನಲ್ಲಿ ರಕ್ಷೆ ಬೇಡುತ್ತೇವೆ. ಅಬೂ ಮುಹಮ್ಮದ್‌ರ ಈ ಕಠೋರ ಧೈರ್ಯವನ್ನು ಅನೇಕ ಉಲಮಾಗಳು ಬಹಳ ಹಿಂದೆಯೇ ವಿರೋಧಿಸಿದ್ದರು. ಈ ವಿಷಯದಲ್ಲಿ ಅವರನ್ನು

ಆಕ್ಷೇಪಿಸಿದ್ದರು. ಇದರ ಕಾರಣದಿಂದ ಅವರಿಗೆ ಅನೇಕ ಪರೀಕ್ಷೆಗಳನ್ನು ಎದುರಿಸಬೇಕಾಗಿ ಬಂತು. ನಮಗೂ, ಅವರಿಗೂ, ಸಕಲ ಮುಸಲ್ಮಾನರಿಗೂ ಅಲ್ಲಾಹು ಕ್ಷಮಿಸಲಿ ಎಂದು ನಾವು ಅಲ್ಲಾಹನಲ್ಲಿ ಬೇಡಿಕೊಳ್ಳುತ್ತೇವೆ.

ತನ್ನ ಬಗ್ಗೆ ಅರಿವಿಲ್ಲದೆ ಮಾತನಾಡಬಾರದೆಂದು ಅಲ್ಲಾಹು(ﷻ) ಎಚ್ಚರಿಕೆ ನೀಡಿದ್ದಾನೆ. ಯಾವುದೇ ಪುರಾವೆಯಿಲ್ಲದೆ ನಿಷಿದ್ಧ ಮತ್ತು ಧರ್ಮಸಮ್ಮತವೆಂದು ಹೇಳುವುದನ್ನು ಅವನು ವಿರೋಧಿಸಿದ್ದಾನೆ. ಇದು ಶೈತಾನನ ಆದೇಶ ಮತ್ತು ಆಕರ್ಷಣೆಗಳಲ್ಲಿ ಸೇರಿದ್ದೆಂದು ಅಲ್ಲಾಹು(ﷻ) ನಮಗೆ ತಿಳಿಸಿದ್ದಾನೆ.

ಅಲ್ಲಾಹು(ﷻ) ಹೇಳುತ್ತಾನೆ:

﴿ قُلْ إِنَّمَا حَرَّمَ رَبِّيَ ٱلْفَوَٰحِشَ مَا ظَهَرَ مِنْهَا وَمَا بَطَنَ وَٱلْإِثْمَ وَٱلْبَغْىَ بِغَيْرِ ٱلْحَقِّ وَأَن تُشْرِكُوا۟ بِٱللَّهِ مَا لَمْ يُنَزِّلْ بِهِۦ سُلْطَٰنًا وَأَن تَقُولُوا۟ عَلَى ٱللَّهِ مَا لَا تَعْلَمُونَ ﴿٣٣﴾ ﴾

"ಹೇಳಿರಿ. ನನ್ನ ರಬ್ಬ್ ನಿಷಿದ್ಧಗೊಳಿಸಿರುವುದು ಅಶ್ಲೀಲಗಳಲ್ಲಿ ಬಹಿರಂಗವಾಗಿರುವುದನ್ನು ಮತ್ತು ರಹಸ್ಯವಾಗಿರುವುದನ್ನು, ಪಾಪಕೃತ್ಯಗಳನ್ನು, ಯಾವುದೇ ಅರಿವಿಲ್ಲದೆ ಅತಿರೇಕವೆಸಗುವುದನ್ನು, ಅಲ್ಲಾಹು ಯಾವುದೇ ಪುರಾವೆ ಅವತೀರ್ಣಗೊಳಿಸದ ವಸ್ತುಗಳನ್ನು ಅವನೊಡನೆ ಸಹಭಾಗಿಯನ್ನಾಗಿ ಮಾಡುವುದನ್ನು ಮತ್ತು ಅಲ್ಲಾಹನ ಬಗ್ಗೆ ಅರಿವಿಲ್ಲದೆ ಮಾತನಾಡುವುದನ್ನು ಮಾತ್ರವಾಗಿದೆ." (ಅಲ್‌ಅಅ್‌ರಾಫ್ 33)

ಅಲ್ಲಾಹು(ﷻ) ಹೇಳುತ್ತಾನೆ:

﴿ وَلَا تَقُولُوا۟ لِمَا تَصِفُ أَلْسِنَتُكُمُ ٱلْكَذِبَ هَٰذَا حَلَٰلٌ وَهَٰذَا حَرَامٌ لِّتَفْتَرُوا۟ عَلَى ٱللَّهِ ٱلْكَذِبَ ۚ إِنَّ ٱلَّذِينَ يَفْتَرُونَ عَلَى ٱللَّهِ ٱلْكَذِبَ لَا يُفْلِحُونَ ﴿١١٦﴾ مَتَٰعٌ قَلِيلٌ وَلَهُمْ عَذَابٌ أَلِيمٌ ﴿١١٧﴾ ﴾

"ನಿಮ್ಮ ನಾಲಗೆಗಳು ವರ್ಣಿಸುವ ಸುಳ್ಳುಗಳಿಂದ ಇದು ಧರ್ಮಸಮ್ಮತ ಮತ್ತು ಇದು ಧರ್ಮನಿಷಿದ್ಧ ಎಂದು ನೀವು ಹೇಳಬಾರದು. ಇದರಿಂದ ನೀವು ಅಲ್ಲಾಹನ ಹೆಸರಲ್ಲಿ ಸುಳ್ಳನ್ನು ಆರೋಪಿಸಿದಂತಾಗುವುದು. ಅಲ್ಲಾಹನ ಹೆಸರಲ್ಲಿ ಸುಳ್ಳನ್ನು ಆರೋಪಿಸುವವರು ಎಂದಿಗೂ ಯಶಸ್ವಿಯಾಗಲಾರರು. ತಾತ್ಕಾಲಿಕವಾದ ಸುಖಭೋಗ ಮಾತ್ರ. ಅವರಿಗೆ ಯಾತನಾಮಯ ಶಿಕ್ಷೆ ಕಾದಿದೆ." (ಅನ್ನಹ್ಲ್ 116-117)

ಅಲ್ಲಾಹು(ﷻ) ಹೇಳುತ್ತಾನೆ:

﴿ يَٰٓأَيُّهَا ٱلنَّاسُ كُلُوا۟ مِمَّا فِى ٱلْأَرْضِ حَلَٰلًا طَيِّبًا وَلَا تَتَّبِعُوا۟ خُطُوَٰتِ ٱلشَّيْطَٰنِ ۚ إِنَّهُۥ لَكُمْ عَدُوٌّ مُّبِينٌ ﴿١٦٨﴾ إِنَّمَا يَأْمُرُكُم بِٱلسُّوٓءِ وَٱلْفَحْشَآءِ وَأَن تَقُولُوا۟ عَلَى ٱللَّهِ مَا لَا تَعْلَمُونَ ﴿١٦٩﴾ ﴾

"ಓ ಸತ್ಯವಿಶ್ವಾಸಿಗಳೇ! ಭೂಮಿಯಲ್ಲಿರುವ ಧರ್ಮಸಮ್ಮತವಾದ ಮತ್ತು ಶುದ್ಧವಾದ ವಸ್ತುಗಳನ್ನು ತಿನ್ನಿರಿ. ಶೈತಾನನ ಹೆಜ್ಜೆ ಗುರುತುಗಳನ್ನು ಹಿಂಬಾಲಿಸಬೇಡಿರಿ. ಖಂಡಿತವಾಗಿಯೂ ಅವನು ನಿಮ್ಮ ಪ್ರತ್ಯಕ್ಷ ಶತ್ರುವಾಗಿದ್ದಾನೆ. ಅವನು ನಿಮಗೆ ಕೆಡುಕು ಮತ್ತು ಅಶ್ಲೀಲಗಳನ್ನು ಮಾಡಲು ಹಾಗೂ ಅಲ್ಲಾಹನ ಹೆಸರಲ್ಲಿ ನಿಮಗೆ ಅರಿವಿಲ್ಲದ್ದನ್ನು ಹೇಳಲು ಮಾತ್ರ ಆದೇಶಿಸುತ್ತಾನೆ." (ಅಲ್‌ಬಕರ 168-169)

ಅರಿವಿಲ್ಲದೆ ಹಲಾಲ್ ಮತ್ತು ಹರಾಮ್‌ಗಳ ಬಗ್ಗೆ ಮಾತನಾಡಬಾರದೆಂದು ಅಲ್ಲಾಹು(ﷻ) ಈ ಮೇಲಿನ ಆಯತ್‌ಗಳಲ್ಲಿ ಎಚ್ಚರಿಸಿದ್ದಾನೆ. ಅಲ್ಲಾಹನ ವಿಷಯದಲ್ಲಿ ಅರಿವಿಲ್ಲದೆ ಮಾತನಾಡುವುದು ಶಿರ್ಕ್‌ಗಿಂತಲೂ ಮೇಲಿನ ಗುರುತರ ಅಪರಾಧವೆಂದು ವಿವರಿಸಿದ್ದಾನೆ. ಅಲ್ಲಾಹನ ವಿಷಯದಲ್ಲಿ ಅರಿವಿಲ್ಲದೆ ಮಾತನಾಡುವುದನ್ನು ಶೈತಾನನು ಇಷ್ಟಪಡುತ್ತಾನೆ ಮತ್ತು ಜನರಿಗೆ ಅವರ ಧರ್ಮವನ್ನು, ಸ್ವಭಾವವನ್ನು ಮತ್ತು ಸಮಾಜವನ್ನು ಗೊಂದಲಗೊಳಿಸಲು ಅಲ್ಲಾಹನ ವಿಷಯದಲ್ಲಿ ಅರಿವಿಲ್ಲದೆ ಮಾತನಾಡುವುದನ್ನು ಅವನು ಆದೇಶಿಸುತ್ತಾನೆಂದು ಅಲ್ಲಾಹು ತನ್ನ ದಾಸರಿಗೆ ಎಚ್ಚರಿಕೆ ನೀಡಿದ್ದಾನೆ.

ಆದ್ದರಿಂದ ಅಲ್ಲಾಹನ ವಿಷಯದಲ್ಲಿ ಅರಿವಿಲ್ಲದೆ ಮಾತನಾಡುವುದರ ಬಗ್ಗೆ ಎಚ್ಚರಿಕೆ ವಹಿಸುವುದು, ಹಲಾಲ್ ಮತ್ತು ಹರಾಮ್‌ಗಳ ವಿಷಯದಲ್ಲಿ ಅಲ್ಲಾಹನನ್ನು(ﷻ) ಭಯಪಡುವುದು, ಸ್ವೇಚ್ಛೆ ಮತ್ತು ಅಂಧಾನುಕರಣೆಗಳಿಂದ ಸಂಪೂರ್ಣ ಮುಕ್ತರಾಗುವುದು, ಅಲ್ಲಾಹು ಅವನ ಗ್ರಂಥದಲ್ಲಿ ವಿವರಿಸಿದ ರೀತಿಯಲ್ಲಿ ಅಥವಾ ಪ್ರವಾದಿಯವರು(ﷺ) ಅವರ ಸುನ್ನತ್ತಿನಲ್ಲಿ ನಿರ್ದೇಶಿಸಿದ ರೀತಿಯಲ್ಲಿ ಅಲ್ಲಾಹನ ನಿಯಮಗಳನ್ನು ಜನರಿಗೆ ವಿವರಿಸಿಕೊಡುವುದು ಕಡ್ಡಾಯವಾಗಿದೆ. ಅಲ್ಲಾಹನಿಂದ ಸಿಗುವ ಪ್ರತಿಫಲವನ್ನು ಆಶಿಸುತ್ತಾ ಇಲ್ಮ್ ಮತ್ತು

ಈಮಾನ್ ಇರುವ ವಿದ್ವಾಂಸರು ಕ್ರಮಿಸಿದ ಮಾರ್ಗದಲ್ಲಿ ಕ್ರಮಿಸಲು ಅಲ್ಲಾಹು ನಮಗೂ ನಮ್ಮ ಸಹೋದರರಿಗೂ ತೌಫೀಕ್ ನೀಡಲಿ. ನಮ್ಮ ದೇಹಗಳ ಕೆಡುಕಿನಿಂದ ಮತ್ತು ನಮ್ಮ ಕರ್ಮಗಳ ಕೆಡುಕಿನಿಂದ ನಮ್ಮನ್ನು ರಕ್ಷಿಸಲಿ. ಖಂಡಿತವಾಗಿಯೂ ಅವನಿಗೆ ಎಲ್ಲ ವಿಷಯಗಳಲ್ಲೂ ಸಾಮರ್ಥ್ಯವಿದೆ.

ಓದುಗ ಬಾಂಧವರೇ! ಅಬೂ ತುರಾಬ್ ಮತ್ತು ಅವರ ಇಮಾಮರಾದ ಅಬೂ ಮುಹಮ್ಮದ್‌ರಿಗೆ ಸಂಭವಿಸಿದ ತಪ್ಪುಗಳನ್ನು ಇನ್ ಶಾ ಅಲ್ಲಾಹ್ ನಾನು ಇಲ್ಲಿ ನಿಮ್ಮ ಮುಂದೆ ವಿವರಿಸುತ್ತೇನೆ. ನೀವು ಈ ವಿಷಯದಲ್ಲಿ ನೇರವಾದ ಮಾರ್ಗದಲ್ಲಿ ನೆಲೆನಿಲ್ಲುವಂತಾಗಲು ಮತ್ತು ಅಲ್ಲಾಹು ಇಚ್ಛಿಸಿದರೆ ನಿಮ್ಮ ಹೃದಯಕ್ಕೆ ಅಂಟಿಕೊಂಡಿರುವ ಸಂಶಯ ಸಂದೇಹಗಳು ನಿವಾರಣೆಯಾಗಲು ಹಾಡು ಮತ್ತು ಸಂಗೀತೋಪಕರಣಗಳ ವಿಷಯದಲ್ಲಿ ಅವತೀರ್ಣಗೊಂಡ ಆಯತ್‌ಗಳು ಮತ್ತು ಸಹೀಹಾದ ಹದೀಸ್‌ಗಳನ್ನು ಹಾಗೂ ಈ ವಿಷಯದಲ್ಲಿ ವಿದ್ವಾಂಸರು ಹೇಳಿದ ಮಾತುಗಳನ್ನೂ ವಿವರಿಸಿಕೊಡುತ್ತೇನೆ. ಅಬೂ ತುರಾಬ್ ಮತ್ತು ಅವರಂತಹ ಜನರ ಲೇಖನಗಳನ್ನು ಓದುವವರು ಈ ವಿಷಯದಲ್ಲಿ ಪರೀಕ್ಷೆಗೊಳಪಡುವುದು ನಿಶ್ಚಿತ. ಅಲ್ಲಾಹನಲ್ಲಿ ನಾವು ಸಹಾಯ ಬೇಡುತ್ತೇವೆ. ಅವನಲ್ಲಿ ನಾವು ಭರವಸೆಯಿಡುತ್ತೇವೆ. ಅತ್ಯುನ್ನತನೂ ಮಹಾಮಹಿಮನೂ ಆದ ಅಲ್ಲಾಹನ ಹೊರತು ಇತರ ಯಾರಲ್ಲೂ ಶಕ್ತಿ ಸಾಮರ್ಥ್ಯಗಳಿಲ್ಲ.

ಅಬೂ ತುರಾಬ್ ಹೇಳುತ್ತಾರೆ. "ಒಟ್ಟಿನಲ್ಲಿ ಹಾಡು, ಅದರ ಉಪಕರಣಗಳು ಮತ್ತು ಅದಕ್ಕೆ ಕಿವಿಗೊಡುವುದು ನಿಷಿದ್ಧವಲ್ಲ. ಮುಹಮ್ಮದ್ (ﷺ) ರವರು ತಂದ ಶರೀಅತ್ತಿನಲ್ಲಿ ಇದನ್ನು ನಿಷಿದ್ಧವೆಂದು ಹೇಳುವ ಯಾವುದೇ ವಚನವೂ ಇಲ್ಲ. ಇದು ನಿಷಿದ್ಧವೆನ್ನುವುದಕ್ಕೆ ಕುರ್‌ಆನ್ ಮತ್ತು ಸುನ್ನತ್ತಿನಿಂದ, ಹಾಗೂ ಇತರ ಮೂಲಗಳಿಂದ ತೋರಿಸಲಾಗುವ ಪುರಾವೆಗಳೆಲ್ಲವೂ ಅತಿರೇಕ, ಸುಳ್ಳು ಮತ್ತು ತಿರಸ್ಕೃತ. ಅಲ್ಲಾಹು ವಿಧಿಸಿದ ಗಡಿಯನ್ನು ದಾಟುವುದು ಸತ್ಯವಿಶ್ವಾಸಿಗೆ ಖಂಡಿತ ಸಮ್ಮತಾರ್ಹವಲ್ಲ."

ನಾನು ಹೇಳುತ್ತೇನೆ: ಅಲ್ಲಾಹು ನಿಷಿದ್ಧಗೊಳಿಸಿದ ಹಾಡು ಮತ್ತು ಸಂಗೀತೋಪಕರಣಗಳನ್ನು ಧರ್ಮಸಮ್ಮತಗೊಳಿಸುವ ಮೂಲಕ ಅಬೂ ಮುಹಮ್ಮದ್ ತಪ್ಪೆಸಗಿದ್ದಾರೆ. ಅವರನ್ನು ಹಿಂಬಾಲಿಸಿ ಅವರ ಅನುಯಾಯಿ ಅಬೂ ತುರಾಬ್ ಕೂಡ ತಪ್ಪೆಸಗಿದ್ದಾರೆ. ಇವರಿಬ್ಬರೂ ಜನರಿಗೆ ಮಹಾ ಕೆಡುಕಿನ ದ್ವಾರವನ್ನು ತೆರೆದುಕೊಟ್ಟಿದ್ದಾರೆ. ತನ್ಮೂಲಕ ಇಬ್ಬರೂ ಈಮಾನಿನ ಜನರಾದ, ಕುರ್‌ಆನ್ ಮತ್ತು ಸುನ್ನತ್ತಿನ ವಾಹಕರಾದ ಸಹಾಬಾಗಳ ಮತ್ತು ಅವರನ್ನು ಹಿಂಬಾಲಿಸಿದವರ ಮಾರ್ಗಕ್ಕೆ ವಿರುದ್ಧವಾಗಿ ಚಲಿಸಿದ್ದಾರೆ. ಖಂಡಿತವಾಗಿಯೂ ಇದೊಂದು ಮಹಾ ವಿಷಯವಾಗಿದೆ. ಇದರ ಅಪಾಯವು ಭೀಕರವಾಗಿದೆ.

ಹಾಡುಗಳು ಮತ್ತು ಸಕಲ ರೀತಿಯ ಸಂಗೀತೋಪಕರಣಗಳು ನಿಷಿದ್ಧವೆಂದು ಇಸ್ಲಾಮೀ ವಿದ್ವಾಂಸರಲ್ಲಿ ಹೆಚ್ಚಿನವರು ಮತ್ತು ಇಮಾಂಗಳಲ್ಲಿ ಬಹುಪಾಲು ಮಂದಿ ಅಭಿಪ್ರಾಯಪಟ್ಟಿದ್ದಾರೆ. ಸಂಗೀತೋಪಕರಣಗಳನ್ನು ನಾಶ ಮಾಡುವುದು ಕಡ್ಡಾಯವೆಂದು ಅವರು ಹೇಳಿದ್ದಾರೆ. ಹಾಡಿನೊಂದಿಗೆ ತಬಲ, ವಾದ್ಯ, ತಂತಿ ಮುಂತಾದವುಗಳು ಸೇರಿಕೊಂಡರೆ ವಿದ್ವಾಂಸರ ಒಮ್ಮತಾಭಿಪ್ರಾಯದ ಪ್ರಕಾರ ಅದು ನಿಷಿದ್ಧವೆನ್ನುವುದರಲ್ಲಿ ಸಂಶಯವೇ ಇಲ್ಲ.

ಆದರೆ ವಿವಾಹ ಸಮಾರಂಭಗಳ ಸಂದರ್ಭ ಚಿಕ್ಕ ಹುಡುಗಿಯರು ಬಾರಿಸುವ ದಫ್ಫ್ ಇದಕ್ಕೆ ಹೊರತಾಗಿದೆ. ಇದರ ಬಗ್ಗೆ ಮುಂದೆ ವಿವರಿಸಲಾಗುವುದು ಇನ್ ಶಾ ಅಲ್ಲಾಹ್.

ಹಾಡು ಮತ್ತು ಸಂಗೀತೋಪಕರಣಗಳು ಒಟ್ಟುಗೂಡಿದರೆ ಅದು ನಿಷಿದ್ಧವೆಂಬ ವಿಷಯದಲ್ಲಿ ಮುಸ್ಲಿಮ್ ಉಲಮಾಗಳ ಒಮ್ಮತಾಭಿಪ್ರಾಯವಿದೆಯೆಂದು ಅಬೂ ಅಮ್ರ್ ಇಬ್ನು ಸ್ವಲಾಹ್ ಉದ್ಧರಿಸಿದ್ದಾರೆ. ಅವರ ಮಾತುಗಳನ್ನು ಅಲ್ಲಾಮಾ ಇಬ್ನುಲ್ ಕಯ್ಯಿಂ ಉಲ್ಲೇಖಿಸಿದ ರೀತಿಯಲ್ಲೇ ನಾನು ಮುಂದೆ ವಿವರಿಸಲಿದ್ದೇನೆ. ಮಾತ್ರವಲ್ಲ, ಹಾಡು ಮತ್ತು ಮನೋರಂಜನಾ ಉಪಕರಣಗಳ ಪರಿಣಾಮವಾಗಿ ಹೃದಯಗಳು ಕಠೋರವಾಗುತ್ತವೆ. ಕುರ್‌ಆನ್ ಹಾಗೂ ಉಪಯುಕ್ತವಾದ ಜ್ಞಾನಗಳ ಕಡೆಗೆ ಕಿವಿಗೊಡುವುದನ್ನು ಅದು ತಡೆಯುತ್ತದೆ. ಇದು ಶೈತಾನನು ಮನುಷ್ಯರಿಗೆ ಬೀಸಿದ ಅವನ ಬಲೆಯೆನ್ನುವುದರಲ್ಲಿ ಯಾವುದೇ ಸಂಶಯವಿಲ್ಲ. ಜ್ಞಾನ ಮತ್ತು ಧರ್ಮದಲ್ಲಿ ಕೊರತೆಯುಳ್ಳವರನ್ನು ಅವನು ಇದರ ಮೂಲಕ ಬೇಟೆಯಾಡುತ್ತಾನೆ. ಅಲ್ಲಾಹನ ಗ್ರಂಥ ಮತ್ತು ಪ್ರವಾದಿಯವರ(ﷺ) ಹದೀಸ್‌ಗಳ ಕಡೆಗೆ ಕಿವಿಗೊಡುವುದರ ಬದಲು ಶೈತಾನನ ವಾದ್ಯದ ಕಡೆಗೆ ಕಿವಿಗೊಡುವಂತೆ ಅವರನ್ನು ಪ್ರೇರೇಪಿಸುತ್ತಾನೆ.

ಹಾಡು ಮತ್ತು ಸಂಗೀತಗಳಲ್ಲಿ ತಲ್ಲೀನರಾಗುವವರ ಬಗ್ಗೆ ಸಲಫುಸ್ಸಾಲಿಹ್‌ಗಳು ಕಠೋರ ಎಚ್ಚರಿಕೆ ನೀಡಿದ್ದಾರೆ. ಅವರನ್ನು ಅವಿವೇಕಿಗಳು ಮತ್ತು ದುಷ್ಟರೆಂದು ವರ್ಣಿಸಿದ್ದಾರೆ. ಅವರ ಸಾಕ್ಷಿಯನ್ನು ಅಂಗೀಕರಿಸಬಾರದೆಂದು ಹೇಳಿದ್ದಾರೆ. ಅವರ ಕೆಲವು ಮಾತುಗಳು ಮುಂದೆ ಬರಲಿವೆ. ಇನ್ ಶಾ ಅಲ್ಲಾಹ್.

ಏಕೆಂದರೆ, ಹಾಡು ಮತ್ತು ವಾದ್ಯೋಪಕರಣಗಳಲ್ಲಿ ತಲ್ಲೀನರಾಗುವುದರಿಂದ ಈಮಾನ್ ದುರ್ಬಲವಾಗುತ್ತದೆ, ನಾಚಿಕೆ ಮತ್ತು ದೇವಭಯ

ಕಡಿಮೆಯಾಗುತ್ತದೆ, ಅಲ್ಲಾಹನ ಆದೇಶ ಮತ್ತು ನಿಷೇಧಗಳ ಬಗ್ಗೆ ತಿರಸ್ಕಾರ ಮೂಡುತ್ತದೆ. ಹಾಡುಗಾರಿಕೆ ಮತ್ತು ವಾದ್ಯೋಪಕರಣಗಳ ಜನರು ಧರ್ಮದ ಬಗ್ಗೆ ನಿರ್ಲಕ್ಷಿತರಾಗುತ್ತಾರೆ, ಮಿಥ್ಯದಲ್ಲಿ ತೃಪ್ತರಾಗುತ್ತಾರೆ, ನಮಾಝ್ ಮತ್ತು ಒಳಿತಿನ ಕಾರ್ಯಗಳನ್ನು ಭಾರವಾಗಿ ಕಾಣುತ್ತಾರೆ, ಹಾಡು ಮತ್ತು ಸಂಗೀತದಿಂದ ಉದ್ಭವಿಸುವ ವ್ಯಭಿಚಾರ, ಸಲಿಂಗರತಿ, ಮದ್ಯಪಾನ, ಹೆಂಗಸರ ಸಂಗ ಇತ್ಯಾದಿಗಳಲ್ಲಿ ಕ್ರಿಯಾಶೀಲರಾಗುತ್ತಾರೆ. ಅಲ್ಲಾಹು ಕಾಪಾಡಲಿ. ಈ ಮೇಲಿನ ಕಾರ್ಯಗಳ ಪರಿಣಾಮವಾಗಿ ಉಂಟಾಗುವ ಕೆಡುಕು ಮತ್ತು ವಿನಾಶದ ಬಗ್ಗೆ, ಅದರಲ್ಲಿರುವ ದುರ್ಮಾರ್ಗಗಳ ಬಗ್ಗೆ ಬುದ್ಧಿವಂತರಿಗೆ ಹೆಚ್ಚು ತಿಳಿಸಿಕೊಡಬೇಕಾಗಿಲ್ಲ.

ಮಾನ್ಯ ಓದುಗರೇ! ಹಾಡು ಮತ್ತು ಸಂಗೀತಗಳು ನಿಷಿದ್ಧವೆಂಬ ವಿಷಯದಲ್ಲಿ ಬಂದಿರುವ ಪವಿತ್ರ ಕುರ್‌ಆನಿನ ಕೆಲವು ಆಯತ್‌ಗಳನ್ನು ಮತ್ತು ಪ್ರವಾದಿಯವರ(ﷺ) ಸಹೀಹಾದ ಹದೀಸ್‌ಗಳನ್ನು ನಾನಿಲ್ಲಿ ಉಲ್ಲೇಖಿಸುತ್ತಿದ್ದೇನೆ.

ಅಲ್ಲಾಹು(ﷻ) ಹೇಳುತ್ತಾನೆ:

﴿وَمِنَ ٱلنَّاسِ مَن يَشۡتَرِي لَهۡوَ ٱلۡحَدِيثِ
لِيُضِلَّ عَن سَبِيلِ ٱللَّهِ بِغَيۡرِ عِلۡمٖ وَيَتَّخِذَهَا هُزُوًاۚ
أُوْلَٰٓئِكَ لَهُمۡ عَذَابٞ مُّهِينٞ ٦ وَإِذَا تُتۡلَىٰ عَلَيۡهِ
ءَايَٰتُنَا وَلَّىٰ مُسۡتَكۡبِرٗا كَأَن لَّمۡ يَسۡمَعۡهَا كَأَنَّ
فِيٓ أُذُنَيۡهِ وَقۡرٗاۖ فَبَشِّرۡهُ بِعَذَابٍ أَلِيمٖ ٧﴾

"ಜನರಲ್ಲಿ ಕೆಲವರಿದ್ದಾರೆ. ಅವರು ಅರಿವಿಲ್ಲದೆ ಜನರನ್ನು ಅಲ್ಲಾಹನ ಮಾರ್ಗದಿಂದ ತಪ್ಪಿಸುವುದಕ್ಕಾಗಿ ಮತ್ತು ಅದನ್ನು ಲೇವಡಿ ಮಾಡುವುದಕ್ಕಾಗಿ 'ಲಹ್ವಲ್ ಹದೀಸ'ನ್ನು ಖರೀದಿಸಿ ತರುತ್ತಾರೆ. ಅವರಿಗೆ ನಿಂದನಾತ್ಮಕ ಶಿಕ್ಷೆ ಕಾದಿದೆ. ಅವರ ಮುಂದೆ ನಮ್ಮ ಆಯತ್‌ಗಳನ್ನು ಓದಲಾದರೆ ಅವರು ಅದನ್ನು ಕೇಳಲಿಲ್ಲವೋ ಎಂಬಂತೆ, ಅವರ ಕಿವಿಗಳು ಕಿವುಡಾಗಿದೆಯೋ ಎಂಬಂತೆ ಅಹಂಕಾರದಿಂದ ತಿರುಗಿ ನಡೆಯುತ್ತಾರೆ. ಅವರಿಗೆ ಯಾತನಾಮಯ ಶಿಕ್ಷೆಯ ಬಗ್ಗೆ ಶುಭವಾರ್ತೆ ನೀಡಿರಿ." (ಲುಕ್ಮಾನ್ 6-7)

ಈ ಆಯತ್ತಿನ ವ್ಯಾಖ್ಯಾನದಲ್ಲಿ ಇಬ್ನ್ ಕಸೀರ್(ﷺ) ಹೇಳುತ್ತಾರೆ: "ಅಲ್ಲಾಹನ ಗ್ರಂಥದಿಂದ ಮಾರ್ಗದರ್ಶನ ಪಡೆದು ಅದರ ಪಾರಾಯಣದಿಂದ ಪ್ರಯೋಜನ ಪಡೆಯುವ ಸೌಭಾಗ್ಯವಂತರ ಬಗ್ಗೆ ಪ್ರಸ್ತಾಪಿಸುತ್ತಾ ಅಲ್ಲಾಹು ಹೇಳುತ್ತಾನೆ:

﴿ٱللَّهُ نَزَّلَ أَحۡسَنَ ٱلۡحَدِيثِ كِتَٰبٗا مُّتَشَٰبِهٗا مَّثَانِيَ
تَقۡشَعِرُّ مِنۡهُ جُلُودُ ٱلَّذِينَ يَخۡشَوۡنَ رَبَّهُمۡ ثُمَّ
تَلِينُ جُلُودُهُمۡ وَقُلُوبُهُمۡ إِلَىٰ ذِكۡرِ ٱللَّهِۚ﴾

"ಅಲ್ಲಾಹು ಅತ್ಯುತ್ತಮ ವಾರ್ತೆಯನ್ನು ಅವತೀರ್ಣಗೊಳಿಸಿದನು. ಅದು ಪರಸ್ಪರ ಸಾದೃಶ್ಯವಿರುವ ವಚನಗಳನ್ನು ಮತ್ತು ಪುನರಾವರ್ತಿಸಲ್ಪಡುವ ವಚನಗಳನ್ನು ಹೊಂದಿರುವ ಗ್ರಂಥ. ಅದನ್ನು ಪಾರಾಯಣ ಮಾಡುವಾಗ ತಮ್ಮ ರಬ್ಬನ್ನು ಭಯಪಡುವವರ ಚರ್ಮವು ನಡುಗುವುದು. ನಂತರ ಅವರ ಚರ್ಮ ಮತ್ತು ಹೃದಯವು ಅಲ್ಲಾಹನ ಸ್ಮರಣೆಗಾಗಿ ಮೃದುವಾಗುವುದು." (ಅಝ್ಝುಮರ್ 23)

ಇದಕ್ಕೆ ಅನುಬಂಧಿತವಾಗಿ, ಅಲ್ಲಾಹನ ಗ್ರಂಥದ ಪಾರಾಯಣದಿಂದ ಪ್ರಯೋಜನ ಪಡೆಯದೆ ತಿರುಗಿ ನಡೆಯುವ, ವಾದ್ಯ, ಹಾಡು, ರಾಗ ಮತ್ತು ಸಂಗೀತೋಪಕರಣಗಳ ಶಬ್ದವನ್ನು ಕೇಳುತ್ತಾ ಮನರಂಜನೆ ಪಡೆಯುವ ಹತಭಾಗ್ಯರ ಬಗ್ಗೆ ಪ್ರಸ್ತಾಪಿಸುತ್ತಾ ಅಲ್ಲಾಹು (ﷻ) ಹೇಳುತ್ತಾನೆ.

﴿وَمِنَ ٱلنَّاسِ مَن يَشۡتَرِي لَهۡوَ ٱلۡحَدِيثِ
لِيُضِلَّ عَن سَبِيلِ ٱللَّهِ بِغَيۡرِ عِلۡمٖ وَيَتَّخِذَهَا هُزُوًاۚ
أُوْلَٰٓئِكَ لَهُمۡ عَذَابٞ مُّهِينٞ ٦ وَإِذَا تُتۡلَىٰ عَلَيۡهِ
ءَايَٰتُنَا وَلَّىٰ مُسۡتَكۡبِرٗا كَأَن لَّمۡ يَسۡمَعۡهَا كَأَنَّ
فِيٓ أُذُنَيۡهِ وَقۡرٗاۖ فَبَشِّرۡهُ بِعَذَابٍ أَلِيمٖ ٧﴾

"ಜನರಲ್ಲಿ ಕೆಲವರಿದ್ದಾರೆ. ಅವರು ಅರಿವಿಲ್ಲದೆ ಜನರನ್ನು ಅಲ್ಲಾಹನ ಮಾರ್ಗದಿಂದ ತಪ್ಪಿಸುವುದಕ್ಕಾಗಿ ಮತ್ತು ಅದನ್ನು ಲೇವಡಿ ಮಾಡುವುದಕ್ಕಾಗಿ 'ಲಹ್ವಲ್ ಹದೀಸ'ನ್ನು ಖರೀದಿಸಿ ತರುತ್ತಾರೆ. ಅವರಿಗೆ ನಿಂದನಾತ್ಮಕ ಶಿಕ್ಷೆ ಕಾದಿದೆ. ಅವರ ಮುಂದೆ ನಮ್ಮ ಆಯತ್‌ಗಳನ್ನು ಓದಲಾದರೆ ಅವರು ಅದನ್ನು ಕೇಳಲಿಲ್ಲವೋ ಎಂಬಂತೆ, ಅವರ ಕಿವಿಗಳು ಕಿವುಡಾಗಿದೆಯೋ ಎಂಬಂತೆ ಅಹಂಕಾರದಿಂದ ತಿರುಗಿ ನಡೆಯುತ್ತಾರೆ. ಅವರಿಗೆ ಯಾತನಾಮಯ ಶಿಕ್ಷೆಯ ಬಗ್ಗೆ ಶುಭವಾರ್ತೆ ನೀಡಿರಿ." (ಲುಕ್ಮಾನ್ 6-7)

ಅಲ್ಲಾಹನ ಈ ವಚನದ ವ್ಯಾಖ್ಯಾನದಲ್ಲಿ ಇಬ್ನ್ ಮಸ್‌ಊದ್(ﷺ) ರವರು ಹೇಳುತ್ತಾರೆ.

هُوَ وَاللَّهِ الْغِنَاءُ.

"ಅಲ್ಲಾಹನಾಣೆ! ಲಹ್ವಲ್ ಹದೀಸ್ ಎಂದರೆ ಹಾಡು."

ಇಬ್ನ್ ಜರೀರ್ ವರದಿ ಮಾಡುತ್ತಾರೆ. ಅಬ್ದುಲ್ಲಾಹ್ ಇಬ್ನ್ ಮಸ್‌ಊದ್ (ﷺ) ರಲ್ಲಿ ಈ ಆಯತ್ತಿನ ಬಗ್ಗೆ ಕೇಳಲಾದಾಗ ಅವರಿಗೆ ಉತ್ತರಿಸಿದರು.

الْغِنَاءُ، وَاللَّهِ الَّذِي لَا إِلَهَ إِلَّا هُوَ.

"ಯಾರ ಹೊರತು ಅನ್ಯ ಸತ್ಯ ಆರಾಧ್ಯರಿಲ್ಲವೋ ಅವನ ಮೇಲಾಣೆ! ಲಹ್ವಲ್ ಹದೀಸ್ ಎಂದರೆ ಹಾಡು." ಅವರು ಇದನ್ನು ಮೂರು ಬಾರಿ ಪುನರಾವರ್ತಿಸಿ ಹೇಳಿದರು.

ಅಬೂ ಸ್ಸುಹ್ಬಾಅ್ ರಿಂದ ವರದಿ. ಇಬ್ನ್ ಮಸ್‌ಊದ್(ﷺ) ರೊಡನೆ ಈ ಆಯತ್ತಿನ ಬಗ್ಗೆ ಕೇಳಿದಾಗ ಅವರು ಹೇಳಿದರು:

﴿ وَمِنَ ٱلنَّاسِ مَن يَشۡتَرِي لَهۡوَ ٱلۡحَدِيثِ ﴾ الْغِنَاءُ

"ಲಹ್ವಲ್ ಹದೀಸ್ ಎಂದರೆ ಹಾಡು."

ಇಬ್ನ್ ಅಬ್ಬಾಸ್, ಜಾಬಿರ್, ಇಕ್ರಿಮ, ಸಈದ್ ಇಬ್ನ್ ಜುಬೈರ್, ಮುಜಾಹಿದ್, ಮಕ್‌ಹೂಲ್, ಅಮ್ರ್ ಇಬ್ನ್ ಶುಐಬ್, ಅಲೀ ಇಬ್ನ್ ಬದೈಮ ಮುಂತಾದವರು ಕೂಡ ಹೀಗೆಯೇ ವ್ಯಾಖ್ಯಾನಿಸಿದ್ದಾರೆ. ಅಲ್‌ಹಸನುಲ್ ಬಸ್ರಿ ಹೇಳುತ್ತಾರೆ.

نَزَلَتْ هَذِهِ الْآيَةُ: ﴿ وَمِنَ ٱلنَّاسِ مَن يَشۡتَرِي لَهۡوَ ٱلۡحَدِيثِ لِيُضِلَّ عَن سَبِيلِ ٱللَّهِ ﴾ فِي الْغِنَاءِ وَالْمَزَامِيرِ.

"ಜನರಲ್ಲಿ ಕೆಲವರಿದ್ದಾರೆ. ಅವರು ಅರಿವಿಲ್ಲದೆ ಜನರನ್ನು ಅಲ್ಲಾಹನ ಮಾರ್ಗದಿಂದ ತಪ್ಪಿಸುವುದಕ್ಕಾಗಿ ಲಹ್ವಲ್ ಹದೀಸನ್ನು ಖರೀದಿಸಿ ತರುತ್ತಾರೆ. ಈ ಆಯತ್ ಅವತೀರ್ಣವಾದದ್ದು ಹಾಡು ಮತ್ತು ವಾದ್ಯಗಳ ಬಗ್ಗೆಯಾಗಿದೆ."

ಕತಾದ ಹೇಳುತ್ತಾರೆ.

﴿ وَمِنَ ٱلنَّاسِ مَن يَشۡتَرِي لَهۡوَ ٱلۡحَدِيثِ لِيُضِلَّ عَن سَبِيلِ ٱللَّهِ بِغَيۡرِ عِلۡمٍ ﴾ وَاللَّهِ! لَعَلَّهُ لَا يُنْفِقُ فِيهِ مَالًا، وَلَكِنْ شِرَاءُهُ اسْتِحْبَابُهُ. بِحَسْبِ الْمَرْءِ مِنَ الضَّلَالَةِ أَنْ يَخْتَارَ حَدِيثَ الْبَاطِلِ عَلَى حَدِيثِ الْحَقِّ، وَمَا يَضُرُّ عَلَى مَا يَنْفَعُ.

"ಜನರಲ್ಲಿ ಕೆಲವರಿದ್ದಾರೆ. ಅವರು ಅರಿವಿಲ್ಲದೆ ಜನರನ್ನು ಅಲ್ಲಾಹನ ಮಾರ್ಗದಿಂದ ತಪ್ಪಿಸುವುದಕ್ಕಾಗಿ ಲಹ್ವಲ್ ಹದೀಸನ್ನು ಖರೀದಿಸಿ ತರುತ್ತಾರೆ ಎಂಬ ಅಲ್ಲಾಹನ ಮಾತಿನ ಬಗ್ಗೆ ಹೇಳುವುದಾದರೆ, ಅಲ್ಲಾಹನಾಣೆ! ಅದಕ್ಕಾಗಿ ಯಾರೂ ಧನವನ್ನು ವ್ಯಯಿಸುವು-ದಿಲ್ಲ. ಬದಲಾಗಿ ಅದನ್ನು ಖರೀದಿಸುವುದು ಎಂದರೆ ಅದನ್ನು ಉತ್ತಮವಾಗಿ ಕಾಣುವುದು. ಸತ್ಯ ವಾರ್ತೆಗೆ ಬದಲಾಗಿ ಮಿಥ್ಯ ವಾರ್ತೆಯನ್ನು, ಪ್ರಯೋಜನ ನೀಡುವ ವಸ್ತುವಿಗೆ ಬದಲು ಹಾನಿ ಮಾಡುವ ವಸ್ತುವನ್ನು ಆಯ್ಕೆ ಮಾಡುವುದು ಒಬ್ಬ ವ್ಯಕ್ತಿಯ ಮಟ್ಟಿಗೆ ದುರ್ಮಾರ್ಗವಾಗಿ ಧಾರಾಳ ಸಾಕು." [ಇಬ್ನ್ ಕಸೀರ್‌ರವರ ಮಾತು ಇಲ್ಲಿಗೆ ಕೊನೆಗೊಳ್ಳುತ್ತದೆ.]

ಮಾನ್ಯ ಓದುಗರೇ! ಈ ಎರಡು ಆದರಣೀಯ ಆಯತ್‌ಗಳ ಬಗ್ಗೆ ಚಿಂತಿಸಿ ನೋಡಿರಿ. ಇದರ ವ್ಯಾಖ್ಯಾನದಲ್ಲಿ ಇಮಾಮ್ ಇಬ್ನ್ ಕಸೀರ್ ಹೇಳಿದ ಮಾತುಗಳ ಬಗ್ಗೆ ಚಿಂತಿಸಿ ನೋಡಿರಿ. ಈ ಬಗ್ಗೆ ಅವರು ಸಲಫ್‌ಗಳ ಇಮಾಮರಿಂದ ವರದಿ ಮಾಡಿದ ಮಾತುಗಳ ಬಗ್ಗೆ ಚಿಂತಿಸಿ ನೋಡಿರಿ. ಹಾಡು ಮತ್ತು ಮನರಂಜನೆಗಳ ಒಡೆಯರು ಎಂತಹ ಭಯನಕ ಅಪಾಯದಲ್ಲಿದ್ದಾರೆಂದು ಇದರಿಂದ ನಿಮಗೆ ಮನದಟ್ಟಾಗಬಹುದು.

ಈ ಮೇಲಿನ ಆಯತ್‌ಗಳು ಅವರನ್ನು ಎಷ್ಟು ಸ್ಪಷ್ಟವಾದ ಶೈಲಿಯಲ್ಲಿ ಆಕ್ಷೇಪಿಸಿದೆ ಮತ್ತು ಅವರು ಖರೀದಿಸಿ ಈ ಲಹ್ವಲ್ ಹದೀಸ್ ಅವರನ್ನು—ಅವರು ಅರಿತಿದ್ದರೂ ಅರಿತಿರದಿದ್ದರೂ—ದುರ್ಮಾರ್ಗದ ಕಡೆಗೆ ಒಯ್ಯುತ್ತದೆಯೆಂದು ಎಷ್ಟು ಸ್ಪಷ್ಟವಾಗಿ ಹೇಳಿದೆಯೆಂದು ಮನವರಿಕೆ ಮಾಡಿಕೊಳ್ಳಬಹುದು.

ಏಕೆಂದರೆ ಸೂರದ ಆದಿಭಾಗದಲ್ಲಿ ಅಲ್ಲಾಹು(ﷻ) ಪ್ರಶಂಸನೀಯ ವರ್ಣನೆಗಳ ಮೂಲಕ ಕುರ್‌ಆನಿನ ಜನರನ್ನು

أَكْثَرُ الْمُفَسِّـــرِينَ عَلَى أَنَّ لَهْوَ الْحَدِيثِ هُوَ الْغِنَاءُ. وَفَسَّـــرَهُ آخَرُونَ بِالشِّرْكِ. وَفَسَّـــرَهُ جَمَاعَةٌ بِأَخْبَارِ الْأَعَاجِــمِ وَبِالْأَحَادِيــثِ الْبَاطِلَةِ الَّتِــي تَصُدُّ عَنِ الْحَقِّ. وَكُلُّهَا تَفَاسِــيرُ صَحِيحَــةٌ. لَا مُنَافَاةَ بَيْنَهَا. وَالْآيَــةُ الْكَرِيمَةُ تَذُمُّ مَنِ اعْتَادَ مَا يَصُدُّ عَنْ سَــبِيلِ اللَّـــهِ وَيُلْهِيهِ عَــنْ كِتَابِــهِ. وَلَا شَــكَّ أَنَّ الْأَغَانِيَ وَالْآلَاتِ الْمَلَاهِي مِنْ أَقْبَحِ لَهْــوِ الْحَدِيثِ الصَّادِّ عَــنْ كِتَابِ اللَّهِ وَعَنْ سَــبِيلِهِ.

"ಲಹ್ವುಲ್ ಹದೀಸ್ ಎಂದರೆ ಹಾಡು ಎಂದು ಹೆಚ್ಚಿನ ಮುಫಸ್ಸಿ-ರ್‌ಗಳು ಅಭಿಪ್ರಾಯಪಟ್ಟಿದ್ದಾರೆ. ಇತರ ಕೆಲವರು ಅದನ್ನು ಶಿರ್ಕ್ ಎಂದು ಹೇಳಿದ್ದಾರೆ. ಒಂದು ಗುಂಪು ವಿದ್ವಾಂಸರು ಅದನ್ನು ವಿದೇಶಿ ವಾರ್ತೆಗಳು, ಸತ್ಯಮಾರ್ಗದಿಂದ ತಪ್ಪಿಸುವ ಮಿಥ್ಯ ವಾರ್ತೆಗಳು ಎಂದು ಹೇಳಿದ್ದಾರೆ. ಇವೆಲ್ಲ ವ್ಯಾಖ್ಯಾನಗಳೂ ಸರಿಯಾಗಿವೆ. ಇವುಗಳ ಮಧ್ಯೆ ವಿರೋಧಾಭಾಸವಿಲ್ಲ. ಅಲ್ಲಾಹನ ಮಾರ್ಗದಿಂದ ತಡೆಯುವ ಮತ್ತು ಅವನ ಗ್ರಂಥದಿಂದ ದೂರಗೊಳಿಸುವ ವಿಷಯಗಳಲ್ಲಿ ದಿನನಿತ್ಯ ಮಗ್ನರಾಗುವುದನ್ನು ಈ ಆದರಣೀಯ ಆಯತ್ ಆಕ್ಷೇಪಿಸುತ್ತದೆ. ಹಾಡು ಮತ್ತು ಸಂಗೀತೋಪಕರಣಗಳು ಅತಿಕೆಟ್ಟ ಲಹ್ವುಲ್ ಹದೀಸ್ ಆಗಿದೆ ಮತ್ತು ಅಲ್ಲಾಹನ ಗ್ರಂಥ ಮತ್ತು ಅವನ ಮಾರ್ಗದಿಂದ ಜನರನ್ನು ತಡೆಗಟ್ಟುತ್ತದೆ ಎನ್ನುವುದರಲ್ಲಿ ಯಾವುದೇ ಸಂಶಯವಿಲ್ಲ."

ಅಬೂ ಜಅ್‌ಫರ್ ಇಬ್ನ್ ಜರೀರ್(ﷺ) ತಮ್ಮ ತಫ್ಸೀರಿನಲ್ಲಿ ಲಹ್ವುಲ್ ಹದೀಸಿನ ಬಗ್ಗೆ ಉಲಮಾಗಳ ಅಭಿಪ್ರಾಯವನ್ನು ಉಲ್ಲೇಖಿಸು-ತ್ತಾ ಹೇಳುತ್ತಾರೆ.

وَالصَّوَابُ مِــنَ الْقَوْلِ فِــي ذَلِكَ أَنْ يُقَــالَ: عُنِيَ بِــهِ كُلُّ مَا كَانَ مِــنَ الْحَدِيــثِ مُلْهِيًا عَنْ سَــبِيلِ اللَّهِ، مِمَّا نَهَى اللَّهُ عَنِ اسْــتِمَاعِهِ أَوْ رَسُــولُهُ. لِأَنَّ اللَّهَ تَعَالَــى عَمَّ بِقَوْلِــهِ: ﴿لَهْوَ ٱلْحَدِيثِ﴾ وَلَمْ

–ಸತ್ಯವಿಶ್ವಾಸಿಗಳನ್ನು– ಪ್ರಶಂಸಿಸಿದ್ದಾನೆ. ಅವರು ಸನ್ಮಾರ್ಗ ಮತ್ತು ಯಶಸ್ಸಿನ ಜನರೆಂದು ತಿಳಿಸಿದ್ದಾನೆ. ಅಲ್ಲಾಹು(ﷻ) ಹೇಳುತ್ತಾನೆ:

﴿الٓمٓ ﴿١﴾ تِلْكَ ءَايَٰتُ ٱلْكِتَٰبِ ٱلْحَكِيمِ ﴿٢﴾ هُدًى وَرَحْمَةً لِّلْمُحْسِنِينَ ﴿٣﴾ ٱلَّذِينَ يُقِيمُونَ ٱلصَّلَوٰةَ وَيُؤْتُونَ ٱلزَّكَوٰةَ وَهُم بِٱلْءَاخِرَةِ هُمْ يُوقِنُونَ ﴿٤﴾ أُو۟لَٰٓئِكَ عَلَىٰ هُدًى مِّن رَّبِّهِمْ ۖ وَأُو۟لَٰٓئِكَ هُمُ ٱلْمُفْلِحُونَ ﴿٥﴾﴾

"ಅಲಿಫ್—ಲಾಮ್—ಮೀಮ್. ಇದು ಯುಕ್ತಿಪೂರ್ಣವಾದ ಗ್ರಂಥದ ಆಯತ್‌ಗಳು. ಸತ್ಕರ್ಮಿಗಳಿಗೆ ಇದು ಮಾರ್ಗದರ್ಶನ ಮತ್ತು ಕರುಣೆಯಾಗಿದೆ. ಅಂದರೆ ನಮಾಝನ್ನು ಸಂಸ್ಥಾಪಿಸುವ-ವರು, ಝಕಾತ್ ಕೊಡುವವರು ಮತ್ತು ಪರಲೋಕದಲ್ಲಿ ದೃಢವಾಗಿ ವಿಶ್ವಾಸವಿಡುವವರಿಗೆ. ಅವರು ಅವರ ರಬ್ಬಿನ ಕಡೆಯ ಮಾರ್ಗದ-ರ್ಶನದಲ್ಲಿದ್ದಾರೆ. ಅವರೇ ಯಶಸ್ವಿಯಾದವರು." (ಲುಕ್ಮಾನ್ 1-5)

ನಂತರ ಅಲ್ಲಾಹು(ﷻ) ಹೇಳುತ್ತಾನೆ:

﴿وَمِنَ ٱلنَّاسِ مَن يَشْتَرِى لَهْوَ ٱلْحَدِيثِ لِيُضِلَّ عَن سَبِيلِ ٱللَّهِ بِغَيْرِ عِلْمٍ﴾

"ಜನರಲ್ಲಿ ಕೆಲವರಿದ್ದಾರೆ. ಅವರು ಅರಿವಿಲ್ಲದೆ ಜನರನ್ನು ಅಲ್ಲಾಹನ ಮಾರ್ಗದಿಂದ ತಪ್ಪಿಸುವುದಕ್ಕಾಗಿ ಮತ್ತು ಅದನ್ನು ಲೇವಡಿ ಮಾಡುವುದಕ್ಕಾಗಿ 'ಲಹ್ವುಲ್ ಹದೀಸ'ನ್ನು ಖರೀದಿಸಿ ತರುತ್ತಾರೆ." (ಲುಕ್ಮಾನ್ 6-7)

ಇದು ಲಹ್ವುಲ್ ಹದೀಸನ್ನು ಖರೀದಿಸಿದವರನ್ನು, ಸನ್ಮಾರ್ಗದಲ್ಲಾದ ಬಳಿಕ ದುರ್ಮಾರ್ಗವನ್ನು ಆರಿಸಿದವರನ್ನು ಆಕ್ಷೇಪಿಸುತ್ತಾ ಹೇಳಿದ ಮಾತು. ದುರ್ಮಾರ್ಗಕ್ಕೆ ದಾರಿ ತೋರಿಸುವುದೆಲ್ಲವೂ ಆಕ್ಷೇಪಾರ್ಹ-ವಾಗಿವೆ. ಅವುಗಳ ಬಗ್ಗೆ ಎಚ್ಚರ ವಹಿಸುವುದು ಮತ್ತು ಅವುಗಳಿಂದ ದೂರವಾಗುವುದು ಕಡ್ಡಾಯ. ಹಾಫಿಝ್ ಇಬ್ನ್ ಕಸೀರ್ ತಮ್ಮ ತಫ್ಸೀರಿನಲ್ಲಿ ಹೇಳಿದ್ದು ಇದನ್ನೇ. ಇಬ್ನ್ ಜರೀರ್, ಅಲ್‌ಬಗವೀ, ಅಲ್‌ಕುರ್ತುಬಿ ಮುಂತಾದ ಮುಫಸ್ಸಿರ್‌ಗಳು ಕೂಡ ಹೀಗೆಯೇ ಹೇಳಿದ್ದಾರೆ. ಎಲ್ಲಿಯವರೆಗೆಂದರೆ ಅಲ್‌ವಾಹಿದೀ ತಮ್ಮ ತಫ್ಸೀರಿ-ನಲ್ಲಿ ಹೇಳುತ್ತಾರೆ.

يُخَصِّــصْ بَعْضًا دُونَ بَعْضٍ. فَذَلِــكَ عَلَى عُمُومِهِ حَتَّــى يَأْتِــيَ مَا يَــدُلُّ عَلَــى خُصُوصِــهِ. وَالْغِنَاءُ وَالشِّــرْكُ مِنْ ذَلِكَ.

“ಈ ವಿಷಯದಲ್ಲಿ ಹೇಳಬಹುದಾದ ಸರಿಯಾದ ಅಭಿಪ್ರಾಯ ಏನೆಂದರೆ, ಜನರನ್ನು ಅಲ್ಲಾಹನ ಮಾರ್ಗದಿಂದ ತಪ್ಪಿಸಿ ಮೋಜನಲ್ಲಿ ಮುಳುಗಿಸುವ ಮತ್ತು ಅಲ್ಲಾಹು(ﷻ) ಹಾಗೂ ಅವನ ರಸೂಲರು ಕಿವಿಗೊಡುವುದನ್ನು ವಿರೋಧಿಸಿದ ಎಲ್ಲ ವಾರ್ತೆಗಳೂ ‘ಲಹ್ವುಲ್ ಹದೀಸ್’ ಎಂಬ ಶಬ್ದದ ವ್ಯಾಪ್ತಿಯಲ್ಲಿ ಒಳಪಡುತ್ತದೆ. ಏಕೆಂದರೆ ಅಲ್ಲಾಹು(ﷻ) ಅದನ್ನು ಲಹ್ವುಲ್ ಹದೀಸ್ ಎಂದು ಮೊತ್ತವಾಗಿ ಹೇಳಿದ್ದಾನೆ. ಅವುಗಳಲ್ಲಿ ಕೆಲವನ್ನು ಮಾತ್ರ ವಿಶೇಷವಾಗಿ ಹೇಳಿಲ್ಲ. ಆದ್ದರಿಂದ ಅದು ಕೆಲವು ನಿರ್ದಿಷ್ಟ ವಿಷಯಗಳಿಗೆ ಮಾತ್ರ ಅನ್ವಯವೆಂದು ಹೇಳುವ ಪುರಾವೆ ಲಭ್ಯವಾಗುವ ತನಕ ಅದನ್ನು ಮೊತ್ತವಾಗಿ ತೆಗೆದುಕೊಳ್ಳಬೇಕು. ಹಾಡು ಮತ್ತು ಶಿರ್ಕ್ ‘ಲಹ್ವುಲ್ ಹದೀಸ್’ನಲ್ಲಿ ಒಳಪಡುತ್ತದೆ.”

ಅಲ್‌ಕುರ್ತುಬಿ ತಮ್ಮ ತಫ್ಸೀರಿನಲ್ಲಿ ಅಲ್ಲಾಹನ ಈ ಮೇಲಿನ ವಚನವನ್ನು ವ್ಯಾಖ್ಯಾನಿಸುತ್ತಾ ಹೇಳುತ್ತಾರೆ.

﴿ وَمِنَ ٱلنَّاسِ مَن يَشْتَرِى لَهْوَ ٱلْحَدِيثِ ﴾ «مِنْ» فِي مَوْضِعِ رَفْــعٍ بِالِابْتِدَاءِ. وَلَهْوُ الْحَدِيــثِ الْغِنَاءُ فِي قَوْلِ ابْنِ مَسْــعُودٍ وَابْنِ عَبَّاسٍ وَغَيْرِهِمَا.

“ಜನರಲ್ಲಿ ಕೆಲವರಿದ್ದಾರೆ. ಅವರು ‘ಲಹ್ವುಲ್ ಹದೀಸ’ನ್ನು ಖರೀದಿಸಿ ತರುತ್ತಾರೆ. ಇಲ್ಲಿ ‘ಮಿನ್’ ಎನ್ನುವುದು ಪ್ರಾರಂಭವನ್ನು ಸೂಚಿಸುವ ಶಬ್ದ. ಲಹ್ವುಲ್ ಹದೀಸ್ ಎಂದರೆ ಇಬ್ನ್ ಮಸ್‌ಊದ್, ಇಬ್ನ್ ಅಬ್ಬಾಸ್ ಮುಂತಾದವರ ಅಭಿಪ್ರಾಯ ಪ್ರಕಾರ ಹಾಡು.”

ನಂತರ ಅವರು ಈ ಆಯತನ್ನು ದೀರ್ಘವಾಗಿ ವ್ಯಾಖ್ಯಾನ ಮಾಡುತ್ತಾ ಹೇಳುತ್ತಾರೆ:

“ಎರಡನೇ ವಿಷಯ: ಲಹ್ವುಲ್ ಹದೀಸ್ ಎಂದರೆ ಮನಸ್ಸನ್ನು ರೋಮಾಂಚನಗೊಳಿಸುವ, ನಿರ್ಲಿಪ್ತತೆಯನ್ನು ಪ್ರಚೋದಿಸುವ ಮತ್ತು ಭಾವನೆಗಳನ್ನು ಕೆದಕಿ ಸ್ವೇಚ್ಛೆ, ಕಾಮೋದ್ರೇಕ, ಹುಚ್ಚು ಮುಂತಾದವುಗಳನ್ನು ಉತ್ತೇಜಿಸುವ ಹಾಡುಗಳಾಗಿವೆ. ಇಂತಹ ಹಾಡುಗಳು ಮಹಿಳೆಯರ ಸೌಂದರ್ಯವನ್ನು ವರ್ಣಿಸುವ, ಮದ್ಯ ಮುಂತಾದ ನಿಷಿದ್ಧ ವಸ್ತುಗಳ ಹೆಸರನ್ನು ಒಳಗೊಂಡಿರುವ ಹಾಡುಗಳಾಗಿದ್ದರೆ ಅವು ನಿಷಿದ್ಧವೆಂಬುದರಲ್ಲಿ ಎರಡು ಮಾತಿಲ್ಲ. ಏಕೆಂದರೆ ಉಲಮಾಗಳ ಒಮ್ಮತಾಭಿಪ್ರಾಯ ಪ್ರಕಾರ ಅದು ಕೆಟ್ಟ ಮನರಂಜನೆಯಾಗಿದೆ. ಇನ್ನು ಅವು ಮೇಲಿನ ಯಾವುದೂ ಒಳಗೊಳ್ಳದ ಹಾಡುಗಳಾಗಿದ್ದರೆ ಅವುಗಳಲ್ಲಿ ಬಹಳ ಸಣ್ಣ ಪ್ರಮಾಣದಷ್ಟು ಮಾತ್ರ ಸಂತೋಷ ಸಮಾರಂಭಗಳಲ್ಲಿ ಸಮ್ಮತಾರ್ಹವಾಗಿದೆ. ಉದಾಹರಣೆಗೆ ವಿವಾಹ ಸಮಾರಂಭಗಳಲ್ಲಿ, ಹಬ್ಬದ ದಿನಗಳಲ್ಲಿ ಮತ್ತು ಕಠಿಣ ಕೆಲಸದ ಸಂದರ್ಭದಲ್ಲಿ ದೇಹವನ್ನು ಕ್ರಿಯಾಶೀಲಗೊಳಿಸುವುದಕ್ಕಾಗಿ ಹಾಡುವುದು ಇತ್ಯಾದಿ. ಖಂದಕ್ ಯುದ್ಧದ ಸಂದರ್ಭ ಕಂದಕವನ್ನು ತೋಡುವಾಗ ಸಹಾಬಾಗಳು ಹಾಡಿದ್ದರು. ಆದರೆ ಇಂದಿನ ಸೂಫಿಗಳು ಹೊಸದಾಗಿ ಪ್ರಾರಂಭಿಸಿದ ಕೊಳಲು, ವಾದ್ಯ, ತಂತಿ ಮುಂತಾದ ಉಪಕರಣಗಳ ಮೂಲಕ ಹಾಡುವ ಚಟ ನಿಷಿದ್ಧವಾಗಿದೆ ಎನ್ನುವುದರಲ್ಲಿ ಯಾವುದೇ ಸಂಶಯವಿಲ್ಲ.”

ಅಲ್‌ಕುರ್ತುಬಿ ಹೇಳಿದ ಈ ಮಾತು ಅತ್ಯಂತ ಸುಂದರವಾಗಿದೆ. ಈ ವಿಷಯದಲ್ಲಿ ವರದಿಯಾದ ಹದೀಸ್‌ಗಳು ಅವರ ಈ ಮಾತಿಗೆ ಹೊಂದಾಣಿಕೆಯಾಗುತ್ತದೆ. ಅವುಗಳಲ್ಲೊಂದು ಸಹೀಹೈನ್‌ನಲ್ಲಿರುವ ಆಯಿಶಾ(ರ) ರವರ ಹದೀಸ್.

عَنْ عَائِشَــةَ رَضِيَ اللَّــهُ عَنْهَا قَالَــتْ: دَخَلَ عَلَيَّ رَسُــولُ اللَّــهِ صَلَّى اللَّــهُ عَلَيْــهِ وَسَــلَّمَ وَعِنْدِي جَارِيَتَــانِ تُغَنِّيَانِ بِغِنَــاءِ بُعَــاثَ. فَاضْطَجَعَ عَلَى الْفِــرَاشِ وَحَوَّلَ وَجْهَهُ. وَدَخَلَ أَبُــو بَكْرٍ فَانْتَهَرَنِي وَقَــالَ: مِزْمَــارَةُ الشَّــيْطَانِ عِنْدَ النَّبِــيِّ صَلَّى اللَّهُ عَلَيْهِ وَسَلَّمَ؟ فَأَقْبَلَ عَلَيْهِ رَسُــولُ اللَّهِ عَلَيْهِ السَّلَامُ فَقَــالَ: «دَعْهُمَا». فَلَمَّــا غَفَلَ غَمَزْتُهُمَــا فَخَرَجَتَا.

ಆಯಿಶಾ(ರ) ರಿಂದ ವರದಿ. ಅವರು ಹೇಳುತ್ತಾರೆ. ಒಮ್ಮೆ ಪ್ರವಾದಿಯವರು(ﷺ) ನನ್ನ ಬಳಿಗೆ ಬಂದರು. ಆಗ ನನ್ನ ಬಳಿ ಇಬ್ಬರು ಹುಡುಗಿಯರು ಬುಆಸ್ ಹಾಡನ್ನು ಹಾಡುತ್ತಿದ್ದರು. ಪ್ರವಾದಿಯವರು(ﷺ) ಹಾಸಿಗೆಯಲ್ಲಿ ಮಲಗಿ ತಮ್ಮ ಮುಖವನ್ನು ಆ ಕಡೆ ತಿರುಗಿಸಿದರು. ಆಗ ಅಬೂಬಕರ್(ರ) ಅಲ್ಲಿಗೆ ಬಂದು ನನ್ನನ್ನು ಗದರಿಸುತ್ತಾ ಕೇಳಿದರು: “ಪ್ರವಾದಿಯವರ(ﷺ) ಬಳಿ ಶೈತಾನನ

ರಾಗವೇ?" ಆಗ ಪ್ರವಾದಿಯವರು(ﷺ) ಅವರ ಕಡೆಗೆ ತಿರುಗಿ ಹೇಳಿದರು: "ಅವರನ್ನು ಬಿಟ್ಟುಬಿಡಿ." ಹೀಗೆ ಅವರ ಗಮನ ಬೇರೆ ಕಡೆಗೆ ತಿರುಗಿದಾಗ ನಾನು ಆ ಇಬ್ಬರು ಹುಡುಗಿಯರಿಗೆ ಚಿವುಟಿದೆ. ಅವರು ಅಲ್ಲಿಂದ ಹೊರಟುಹೋದರು."

ಮುಸ್ಲಿಮ್‌ನ ವರದಿ ಮಾಡಿದ ಇನ್ನೊಂದು ವರದಿಯಲ್ಲಿ ಪ್ರವಾದಿಯವರು(ﷺ) ಹೇಳುತ್ತಾರೆ:

«يَا أَبَا بَكْرٍ! إِنَّ لِكُلِّ قَوْمٍ عِيدًا وَهَذَا عِيدُنَا».

"ಓ ಅಬೂಬಕರ್! ಎಲ್ಲ ಜನರಿಗೂ ಹಬ್ಬವಿದೆ. ಇದು ನಮ್ಮ ಹಬ್ಬವಾಗಿದೆ."

ಅವರ ಇನ್ನೊಂದು ವರದಿಯಲ್ಲಿ ಹೀಗಿದೆ:

فَقَالَ: «دَعْهُمَا يَا أَبَا بَكْرٍ! فَإِنَّهَا أَيَّامُ عِيدٍ».

"ಆಗ ಪ್ರವಾದಿಯವರು(ﷺ) ಹೇಳಿದರು. ಓ ಅಬೂಬಕರ್! ಅವರನ್ನು ಬಿಟ್ಟುಬಿಡಿ. ಇದು ಹಬ್ಬದ ದಿನಗಳು."

ಬೇರೆ ಕೆಲವು ವರದಿಗಳಲ್ಲಿ ಹೀಗಿದೆ:

جَارِيَتَانِ تَلْعَبَانِ بِدُفٍّ.

"ಇಬ್ಬರು ಹುಡುಗಿಯರು ದಫ್ಫ್ ಹಿಡಿದು ಆಡುತ್ತಿದ್ದರು."

ಹಾಡುವುದನ್ನು ಅಸಹ್ಯಪಡುವುದು, ಅದನ್ನು ವಿರೋಧಿಸುವುದು ಮತ್ತು ಅದನ್ನು ಶೈತಾನನ ರಾಗವೆಂದು ಕರೆಯುವುದು ಸಹಾಬಾಗಳ ನಡುವೆ ವಾಡಿಕೆಯಲ್ಲಿತ್ತು ಎಂದು ಈ ಪ್ರೋಜ್ವಲ ಹದೀಸಿನಿಂದ ಸ್ಪಷ್ಟವಾಗಿ ತಿಳಿದು ಬರುತ್ತದೆ. ಈ ಕಾರಣದಿಂದಲೇ ಅಬೂಬಕರ್(ರ) ರವರು ಆಯಿಶಾ(ರ) ರವರ ಬಳಿ ಹಾಡುತ್ತಿದ್ದ ಆ ಇಬ್ಬರು ಹುಡುಗಿಯರನ್ನು ವಿರೋಧಿಸುತ್ತಾ ಅದನ್ನು ಶೈತಾನನ ವಾದ್ಯವೆಂದು ಕರೆದರು. ಆದರೆ ಅವರು ಅದನ್ನು ಈ ಹೆಸರಲ್ಲಿ ಕರೆದದ್ದನ್ನು ಪ್ರವಾದಿಯವರು(ﷺ) ವಿರೋಧಿಸಲಿಲ್ಲ. ಹಾಡು ಮತ್ತು ದಫ್ಫ್‌ನಲ್ಲಿ ಯಾವುದೇ ತೊಂದರೆಯಿಲ್ಲ ಎಂದು ಪ್ರವಾದಿಯವರು (ﷺ) ಹೇಳಲಿಲ್ಲ. ಬದಲಾಗಿ ಅವರು ಹೇಳಿದ್ದು ಆ ಹುಡುಗಿಯರನ್ನು ಬಿಟ್ಟುಬಿಡಿ ಎಂದು ಮಾತ್ರವಾಗಿತ್ತು. ಅವರು ಇದಕ್ಕೆ ಕಾರಣ ನೀಡಿದ್ದು ಅದು ಹಬ್ಬದ ದಿನವಾಗಿದೆ ಎಂದು.

ಆದ್ದರಿಂದ ಹಬ್ಬದ ಸಂದರ್ಭಗಳಲ್ಲಿ ಇಂತಹ ಚಿಕ್ಕ ಹುಡುಗಿಯರು ಹಾಡುವುದಕ್ಕೆ ಅನುಮತಿಯಿದೆ ಎನ್ನುವುದಕ್ಕೆ ಈ ಹದೀಸ್ ಪುರಾವೆಯಾಗಿದೆ. ಏಕೆಂದರೆ ಹಬ್ಬ ಎಂದರೆ ಸಂತೋಷ ಮತ್ತು ಸಂಭ್ರಮದ ದಿನವಾಗಿದೆ. ಆ ಹುಡುಗಿಯರು ಹಾಡುತ್ತಿದ್ದದ್ದು ಬುಆಸ್ ಯುದ್ಧದಲ್ಲಿ ಅನ್ಸಾರಿಗಳು ಹಾಡುತ್ತಿದ್ದ ಹಾಡನ್ನಾಗಿತ್ತು. ಅದು ಶೌರ್ಯ ಮತ್ತು ಯುದ್ಧವನ್ನು ವರ್ಣಿಸುವ ಹಾಡಾಗಿತ್ತು. ಆದರೆ ಇಂದಿನ ಹಾಡುಗಾರರು ಮತ್ತು ಹಾಡುಗಾರ್ತಿಯರು ಹಾಡುವುದು ಇಂತಹ ಹಾಡುಗಳನ್ನಲ್ಲ. ಇಂದಿನ ಹಾಡುಗಳು ಲೈಂಗಿಕ ಇಚ್ಛೆಯನ್ನು ಉದ್ದೀಪನಗೊಳಿಸುವ ಮತ್ತು ಸಿನಿಮೀಯ ರೀತಿಯಲ್ಲಿರುವ ಪ್ರೇಮದ ಕಡೆಗೆ ಆಮಂತ್ರಿಸುವ ಹಾಡುಗಳಾಗಿವೆ. ಇದು ಮಾತ್ರವಲ್ಲದೆ ಅಲ್ಲಾಹನ ಬಗ್ಗೆಯಿರುವ ಮಹತ್ವವನ್ನು ಹೃದಯದಿಂದ ನಿವಾರಿಸುವ ಹಾಗೂ ಅಲ್ಲಾಹನ ಹಕ್ಕುಗಳನ್ನು ಸಂದಾಯ ಮಾಡದಂತೆ ತಡೆಯೊಡ್ಡುವ ಇನ್ನೂ ಅನೇಕ ವಿನಾಶಗಳು ಇಂದಿನ ಹಾಡುಗಳಲ್ಲಿವೆ.

ಹೀಗಿರುವಾಗ ಇಂತಹ ಹಾಡುಗಳನ್ನು ಪ್ರವಾದಿಯವರ(ﷺ) ಕಾಲದಲ್ಲಿ ಹಾಡಿದ ಹಾಡುಗಳಿಗೆ ಹೋಲಿಸಲು ಒಬ್ಬ ಬುದ್ಧಿವಂತನಿಗೆ ಸಾಧ್ಯವಾಗುವುದಾದರೂ ಹೇಗೆ? ಈ ಹದೀಸನ್ನು ಸರಿಯಾಗಿ ಅರ್ಥಮಾಡಿಕೊಂಡರೆ ಆ ಇಬ್ಬರು ಹುಡುಗಿಯರು ಹಾಡಿದ್ದಕ್ಕಿಂತ, ಅವರ ಕೃತ್ಯಕ್ಕಿಂತ ಆಚಿನದ್ದನ್ನು ವಿರೋಧಿಸಲಾಗಿದೆ ಎಂದು ಖಂಡಿತ ತಿಳಿದುಬರುತ್ತದೆ. ವಿನಾಶದ ಬಾಗಿಲುಗಳನ್ನು ಧ್ವಂಸ ಮಾಡಲು, ಸತ್ಯದಿಂದ ತಡೆಗಟ್ಟುವ ವಿಷಯಗಳಿಂದ ಹೃದಯಗಳನ್ನು ಕಾಪಾಡಿಕೊಳ್ಳಲು ಹಾಗೂ ಅಲ್ಲಾಹನ ಗ್ರಂಥದಿಂದ ಮತ್ತು ಅವನ ಹಕ್ಕುಗಳನ್ನು ಸಂದಾಯ ಮಾಡುವುದರಿಂದ ತಡೆಯಾಗುವಂತೆ ಹೃದಯಗಳನ್ನು ಇತರ ಕಾರ್ಯಗಳಲ್ಲಿ ತಲ್ಲೀನಗೊಳಿಸುವ ಇಂತಹ ಹಾಡುಗಳ ಬಗ್ಗೆ ಎಚ್ಚರಿಕೆ ನೀಡುವುದು ಕಡ್ಡಾಯವಾಗಿದೆ.

ಈಗಾಗಲೇ ವಿವರಿಸಿದ ವಿವರಣೆಗಳ ಆಧಾರದಲ್ಲಿ ನೋಡುವುದಾದರೆ ಹಾಡು ಸಮ್ಮತಾರ್ಹವೆನ್ನುವುದಕ್ಕೆ ಈ ಹದೀಸ್ ಅನಿರ್ಬಂಧಿತವಾದ ಪುರಾವೆಯಾಗಿದೆ ಎಂಬ ಅಬೂ ತುರಾಬರ ವಾದ ಒಂದು ಸುಳ್ಳು ವಾದ ಮಾತ್ರ ಎಂದು ಸ್ಪಷ್ಟವಾಗುತ್ತದೆ. ಈ ವಿಷಯದಲ್ಲಿರುವ ಹದೀಸ್‌ಗಳು, ಅಸರ್‌ಗಳೆಲ್ಲವೂ ಅವರ ವಾದವನ್ನು ಖಂಡಿಸುತ್ತವೆ. ಇದೇ ರೀತಿ ಸುಫ್ಯಾನ್ ಅಸ್ಸೌರಿ ಅಬೂ ಇಸ್‌ಹಾಕ್ ಅಸ್ಸಬೀಈರಿಂದ, ಅವರು ಆಮಿರ್ ಇಬ್ನ್ ಸಅ್‌ದ್ ಅಲ್‌ಬಜಲಿರಿಂದ ವರದಿ ಮಾಡಿದ ಈ ಕೆಳಗಿನ ಹದೀಸ್ ಕೂಡ.

عَنْ عَامِـرِ بْنِ سَـعْدٍ الْبَجَلِيِّ أَنَّهُ رَأَى أَبَا مَسْـعُودٍ الْبَـدْرِيَّ وَقَرَظَةَ بْـنَ كَعْبٍ وَثَابِتَ بْـنَ يَزِيدٍ وَهُمْ فِي عُـرْسٍ وَعِنْدَهُمْ غِنَاءٌ. فَقُلْتُ لَهُـمْ: هَذَا وَأَنْتُمْ أَصْحَابُ رَسُـولِ اللَّـهِ!؟ فَقَالُوا: إِنَّـهُ رُخِّصَ لَنَا فِـي الْغِنَـاءِ فِي الْعُـرْسِ وَالْبُـكَاءِ عَلَـى الْمَيِّتِ مِنْ غَيْـرِ نَوْحٍ.

ಆಮಿರ್ ಇಬ್ನ್ ಸಅ್‌ದ್ ಅಲ್‌ಬಜಲಿ ಹೇಳುತ್ತಾರೆ: ನಾನೊಮ್ಮೆ ಹಾಡುಗಾರಿಕೆಯನ್ನೊಳಗೊಂಡ ಒಂದು ವಿವಾಹ ಸಮಾರಂಭದಲ್ಲಿ ಅಬೂ ಮಸ್‌ಊದ್ ಅಲ್‌ಬದ್ರೀ, ಕರಝ ಇಬ್ನ್ ಕಅ್‌ಬ್ ಮತ್ತು ಸಾಬಿತ್ ಇಬ್ನ್ ಯಝೀದ್ ರನ್ನು ಕಂಡೆ. ನಾನು ಕೇಳಿದೆ: “ನೀವು ಅಲ್ಲಾಹನ ಸಂದೇಶವಾಹಕರ ಸಹಚರರಾಗಿದ್ದೂ ಕೂಡ ಇದು!?” ಅವರು ಹೇಳಿದರು: “ವಿವಾಹ ಸಮಾರಂಭದಲ್ಲಿ ಹಾಡುವುದಕ್ಕೆ ಮತ್ತು ಮೃತರ ಬಳಿ ಅಟ್ಟಹಾಸವಿಲ್ಲದೆ ಅಳುವುದಕ್ಕೆ ನಮಗೆ ರಿಯಾಯಿತಿ ನೀಡಲಾಗಿದೆ.”

ಯಾವುದೇ ಸಂದರ್ಭದಲ್ಲೂ ಹಾಡುವುದಕ್ಕೆ ಈ ಹದೀಸಿನಲ್ಲಿ ಪುರಾವೆಯಿಲ್ಲ. ಬದಲಾಗಿ ಇದರಲ್ಲಿ ಪುರಾವೆಯಿರುವುದು ವಿವಾಹದ ಸಂದರ್ಭ ನಿಕಾಹನ್ನು ಜಾಹೀರುಗೊಳಿಸುವುದಕ್ಕಾಗಿ ಹಾಡಲು ಮಾತ್ರ. ಈ ಹದೀಸನ್ನು ಸರಿಯಾಗಿ ಅಧ್ಯಯನ ಮಾಡಿದರೆ ಇದು ಹಾಡುವುದಕ್ಕೆ ಅನುಮತಿ ನೀಡುವುದಕ್ಕೆ ಬದಲು ಹಾಡುವುದನ್ನು ವಿರೋಧಿಸುತ್ತದೆ ಎಂದು ತಿಳಿದುಬರುತ್ತದೆ.

ಕಾರಣ, ವಿವಾಹ ಸಂದರ್ಭದಲ್ಲಿ ಹಾಡುವುದಕ್ಕೆ ಪ್ರವಾದಿಯವರು (ﷺ) ರಿಯಾಯಿತಿ ನೀಡಿರುವುದು ಒಂದು ಸುಪರಿಚಿತ ಉದ್ದೇಶಕ್ಕಾಗಿದೆ. ಆದ್ದರಿಂದ ಸ್ಪಷ್ಟ ಪುರಾವೆಯ ಆಧಾರದಲ್ಲಲ್ಲದೆ ಅದಲ್ಲದ ಬೇರೆ ಉದ್ದೇಶಕ್ಕಾಗಿ ಹಾಡುವುದಕ್ಕೆ ಅನುಮತಿಯಿಲ್ಲ ಎಂದು ಇದು ಸೂಚಿಸುತ್ತದೆ. ಉದಾಹರಣೆಗೆ, ಪ್ರಯಾಣದಲ್ಲಿರುವವನಿಗೆ ನಾಲ್ಕು ರಕ್‌ಅತ್ ನಮಾಝನ್ನು ಎರಡು ರಕ್‌ಅತ್‌ಗಳಾಗಿ ನಿರ್ವಹಿಸಲು ರಿಯಾಯಿತಿ ನೀಡಲಾಗಿದೆ. ಈ ರಿಯಾಯಿತಿಯು ಪ್ರಯಾಣದಲ್ಲಿಲ್ಲದವರಿಗೆ ನಾಲ್ಕು ರಕ್‌ಅತ್ ನಮಾಝನ್ನು ಎರಡು ರಕ್‌ಅತ್‌ಗಳಾಗಿ ನಿರ್ವಹಿಸಲು ಅನುಮತಿಯಿಲ್ಲ ಎನ್ನುವುದಕ್ಕೆ ಪುರಾವೆಯಾಗಿದೆ. ಅದೇ ರೀತಿ ಋತುಸ್ರಾವ ಮತ್ತು ಹೆರಿಗೆಯಾದವರು ತವಾಫುಲ್ ವದಾಅನ್ನು ತೊರೆಯುವುದಕ್ಕೆ ರಿಯಾಯಿತಿ ನೀಡಲಾಗಿದೆ. ಈ ರಿಯಾಯಿತಿಯು ಋತುಸ್ರಾವ ಮತ್ತು ಹೆರಿಗೆಯಾಗದವರಿಗೆ ತವಾಫುಲ್ ವದಾಅನ್ನು ತೊರೆಯುವುದಕ್ಕೆ ಅನುಮತಿಯಿಲ್ಲ ಎನ್ನುವುದಕ್ಕೆ ಪುರಾವೆಯಾಗಿದೆ. ಇದಕ್ಕೆ ಇನ್ನೂ ಅನೇಕ ಉದಾಹರಣೆಗಳನ್ನು ನೀಡಬಹುದು.

ಇನ್ನು ಆಮಿರ್ ಇಬ್ನ್ ಸಅ್‌ದ್ ಹಾಡನ್ನು ವಿರೋಧಿಸಿದ್ದು ಮತ್ತು ಸಹಾಬಾಗಳು ಅದನ್ನು ಸ್ಥಿರೀಕರಿಸಿದ್ದು ಸಹಾಬಾಗಳ ಮತ್ತು ತಾಬಿಊನ್‌ಗಳ ಕಾಲದಲ್ಲಿ ಹಾಡುಗಾರಿಕೆ ಅಸಹ್ಯವಾಗಿತ್ತು ಮತ್ತು ಅವರು ಅದನ್ನು ವಿರೋಧಿಸುತ್ತಿದ್ದರು ಎನ್ನುವುದಕ್ಕೆ ಪುರಾವೆಯಾಗಿದೆ. ಅವರು ಇದನ್ನು ಪ್ರವಾದಿಯವರಿಂದ(ﷺ) ಕಲಿತಿದ್ದರು.

ಅಲ್ಲಾಮಾ ಇಬ್ನು ಕಯ್ಯಿಮ್(ﷺ) ತಮ್ಮ ‘ಇಗಾಸತು ಲ್ಲಹ್ಫಾನ್ ಮಿನ್ ಮಸಾಇದಿ ಶೈತಾನ್’ ಎಂಬ ಗ್ರಂಥದಲ್ಲಿ ಹೇಳುತ್ತಾರೆ. “

ಸೀಟಿ, ಚಪ್ಪಾಳೆ ಮತ್ತು ನಿಷಿದ್ಧ ಉಪಕರಣ ಸಹಿತವಿರುವ ಹಾಡನ್ನು ಆಲಿಸುವಂತೆ ಮಾಡುವ ಮೂಲಕ ಶೈತಾನನು ಜ್ಞಾನ, ಬುದ್ಧಿ ಮತ್ತು ಧರ್ಮದ ಕೊರತೆಯಿರುವವರಿಗೆ ಬಲೆ ಬೀಸಿ ಅವರ ಪೈಕಿ ಅವಿವೇಕಿಗಳ ಮತ್ತು ಅಸತ್ಯವಾದಿಗಳ ಹೃದಯಗಳನ್ನು ಬೇಟೆಯಾಡುತ್ತಿದ್ದಾನೆ. ಶೈತಾನನು ಅವರ ಹೃದಯಗಳನ್ನು ಕುರ್‌ಆನಿನಿಂದ ತಡೆಗಟ್ಟಿ ದುಷ್ಕರ್ಮ ಮತ್ತು ಧಿಕ್ಕಾರಗಳಲ್ಲಿ ಮುಳುಗುವಂತೆ ಮಾಡುತ್ತಾನೆ. ಹಾಡು ಎನ್ನುವುದು ಶೈತಾನನ ಪಾರಾಯಣ. ಅದು ಕುರ್‌ಆನ್‌ಗೆ ಅಡ್ಡವಾಗಿ ಹಿಡಿದ ಬಹಳ ದಪ್ಪ ಪರದೆ. ಅದು ಸಲಿಂಗರತಿ ಮತ್ತು ವ್ಯಭಿಚಾರದ ಮಂತ್ರ. ಅದರ ಮೂಲಕ ದುಷ್ಟನು ತನ್ನ ಪ್ರೇಯಸಿಯನ್ನು ಆತ್ಯಂತಿಕ ಬಯಕೆಯಿಂದ ಪಡೆಯುತ್ತಾನೆ. ಹಾಡುಗಳ ಮೂಲಕ ಶೈತಾನನು ಮಿಥ್ಯ ಮನಸ್ಸುಗಳಿಗೆ ಬಲೆ ಬೀಸಿ ತನ್ನ ತಂತ್ರ ಮತ್ತು ವಂಚನೆಯಿಂದ ಆ ಮನಸ್ಸುಗಳಿಗೆ ಅದನ್ನು ಅಂದಗೊಳಿಸಿ ತೋರಿಸುತ್ತಾನೆ. ಹಾಡು ಸುಂದರವಾಗಿದೆಯೆಂಬ ಮಿಥ್ಯ ಸಾದೃಶ್ಯವನ್ನು ತೋಚಿಸಿ ದುರ್ಬೋಧನೆ ಮಾಡುತ್ತಾನೆ. ಆ ಮನಸ್ಸುಗಳು ಅವನ ದುರ್ಬೋಧನೆಯನ್ನು ಸ್ವೀಕರಿಸುತ್ತವೆ. ಅದರ ಕಾರಣದಿಂದ ಆ ಮನಸ್ಸುಗಳು ಕುರ್‌ಆನನ್ನು ಬಹಿಷ್ಕರಿಸುತ್ತವೆ.”

ಅವರು ಮುಂದುವರಿದು ಹೇಳುತ್ತಾರೆ: “ಇಸ್ಲಾಮಿನ ಸಹಾಯಕರು, ಸನ್ಮಾರ್ಗದ ಇಮಾಮ್‌ಗಳು ಹಾಡುಗಾರರ ವಿರುದ್ಧ ಭೂಮಿಯ ಉದ್ದಗಲಗಳಲ್ಲಿ ಕಿರಿಚುತ್ತಿದ್ದರು. ಧರ್ಮದ ಎಲ್ಲ ಪಂಗಡಗಳಲ್ಲಿ ವ್ಯಾಪಿಸಿಕೊಂಡಿರುವ ಇವರ ಮಾರ್ಗವನ್ನು ಹಿಂಬಾಲಿಸುವುದರ ಬಗ್ಗೆ, ಇವರ ಹೆಜ್ಜೆಗಳನ್ನು ಅನುಸರಿಸುವುದರ ಸದಾ ಬಗ್ಗೆ ಎಚ್ಚರಿಕೆ ನೀಡುತ್ತಿದ್ದರು.” (ಮುಂದುವರಿಯುವುದು)

# ಮಹಾತ್ಮರೊಂದಿಗೆ ಏಕೆ ಪ್ರಾರ್ಥಿಸಬಾರದು?

ಅಜ್ಮೀರ್ ಖಾಜ, ಮುಹ್ಯುದ್ದೀನ್ ಶೈಖ್, ಬದ್ರ್ ಶುಹದಾ ಮುಂತಾದವರೆಲ್ಲರೂ ಮರಣಹೊಂದಿದ್ದಾರೆ. ಅವರು ಜೀವಂತವಿದ್ದಾಗ ಅವರಿಗೆ ಕಿವಿ, ಕಣ್ಣು, ಮಾತು, ನಡೆ, ಶ್ವಾಸ, ಉಸಿರು, ಎದೆ ಬಡಿತ ಎಲ್ಲವೂ ಇತ್ತು. ಮರಣಹೊಂದಿದಾಗ ಅವರು ಅವೆಲ್ಲವನ್ನೂ ಕಳಕೊಂಡರು. ಅವರನ್ನು ಕಬರ್‌ನಲ್ಲಿ ದಫನ ಮಾಡಲಾಯಿತು. ಆದರೆ ಈಗ ಅವರಿಗೆ ನಿಮ್ಮ ಕರೆ ಕೇಳಿಸುತ್ತದೆ ಎಂಬ ನಂಬಿಕೆಯಿಂದ ನೀವು ಅವರನ್ನು ಕರೆದು ಪ್ರಾರ್ಥಿಸುತ್ತೀರಿ. ಗೋರಿಯಲ್ಲಿ ದಫನ ಮಾಡಿದ ನಂತರವೂ ಅವರಿಗೆ ಜೀವಂತವಿದ್ದಾಗ ಇದ್ದ ಎಲ್ಲ ಸಾಮರ್ಥ್ಯಗಳೂ ಇರುತ್ತವೆಯೆಂದು ನಿಮಗೆ ಯಾರು ಹೇಳಿದ್ದು?

ಆ ಮುಸ್ಲಿಮ್ ಮಹಿಳೆಯ ಮನೆಯ ಹಾಲ್‌ನಲ್ಲಿಟ್ಟ ಟಿ.ವಿ.ಯ ಮೇಲೆ ನಮಗೆ ನಂಬಿಕೆ ಬರದೆ ಪದೇ ಪದೇ ನೋಡಿದೆವು. ಆ ಟಿ.ವಿ.ಯ ಮೇಲೆ ಕೊಳಲು ಊದುವ ಸಾಕ್ಷಾತ್ ಶ್ರೀಕೃಷ್ಣನ ವಿಗ್ರಹನ್ನಿಡಲಾಗಿತ್ತು!

ಆ ದೃಶ್ಯವನ್ನು ಕಂಡು ದಂಗಾದ ನಮ್ಮ ಮುಂದೆ ಆ ಮಹಿಳೆ ಬಂದು ಕೇಳಿದರು, “ಕುಡಿಯಲು ಏನಾದರೂ ತರಲೇ?”

ಆ ಸಂದರ್ಭ ಬಿಸಿಬಿಸಿಯಾದ ಚಹಾ ಸಿಕ್ಕಿದರೆ ಚೆನ್ನಾಗಿತ್ತೆಂದು ಮನಸ್ಸಿನಲ್ಲಿದ್ದರೂ ಬೇಡವೆಂದು ಹೇಳಿದೆವು.

“ಅಲ್ಲಿ ಇದೇನಿದು? ನೀವು ಮುಸ್ಲಿಮ್ ಅಲ್ಲವೇ? ವಿಗ್ರಹ ಇಡುವುದನ್ನು ಇಸ್ಲಾಮ್ ವಿರೋಧಿಸಿದೆಯೆಂದು ನಿಮಗೆ ಗೊತ್ತಿಲ್ಲವೇ?”

“ಓಹೋ! ಅದು ನನ್ನ ಗಂಡ ಮೊದಲು ಹಿಂದೂ ಆಗಿದ್ದರು. ನಾವು ಪ್ರೀತಿಸಿ ಮದುವೆಯಾದೆವು. ನನ್ನನ್ನು ಮದುವೆಯಾಗಲು ಅವರು ಇಸ್ಲಾಮ್ ಧರ್ಮಕ್ಕೆ ಮತಾಂತರವಾದರು. ಅವರು ಮುಸ್ಲಿಮರಾದರೂ ಹಿಂದಿನ ವಿಶ್ವಾಸ ತೊರೆದಿಲ್ಲ. ನಾನು ಅದಕ್ಕೆ ತಡೆಯಾಗಿ ನಿಲ್ಲುವುದಿಲ್ಲ. ವಿರೋಧಿಸಿದರೂ ಪ್ರಯೋಜನವಿಲ್ಲ.”

“ಸರಿ! ಗಂಡನ ವಿಷಯ ಹಾಗಿರಲಿ. ಗೋಡೆಯಲ್ಲಿ ಅಜ್ಮೀರ್ ದರ್ಗಾದ ಚಿತ್ರ ಇದೆಯಲ್ಲ! ಇದೇನು?”

ಈ ಪ್ರಶ್ನೆಗೆ ಆಕೆ ಸ್ವಲ್ಪ ತಡವರಿಸಿದಳು.

“ಅದು… ಅದು ಒಮ್ಮೆ ಅಲ್ಲಿಗೆ ಖುದ್ದಾಗಿ ಸಂದರ್ಶನಕ್ಕೆಂದು ಹೋಗಿದ್ದೆ. ಇದು ಮನೆಯಲ್ಲಿದ್ದರೆ ಶ್ರೀಮಂತಿಕೆ ಬರುತ್ತದೆ. ಶೈಖ್‌ರ ಆಶೀರ್ವಾದ ಸಿಗುತ್ತದೆ ಎಂದು ಹೇಳುತ್ತಾರೆ.”

ಈಕೆಯ ಈ ವಿಶ್ವಾಸವನ್ನು ತಕ್ಷಣಕ್ಕೆ ಬದಲಾಯಿಸಲು ಸಾಧ್ಯ-ವಿಲ್ಲವೆಂದು ಭಾಸವಾದರೂ ಬಂದ ಕಾರಣಕ್ಕೆ ಏನಾದರೂ ಸ್ವಲ್ಪ ಅವರಿಗೆ ತಿಳಿಸದಿದ್ದರೆ ನಾಳೆ ಪರಲೋಕದಲ್ಲಿ ಆಕೆ ನಮಗೆ ವಿರುದ್ಧವಾಗಿ ವಾದಿಸಬಹುದೆಂದು ನೆನೆದು ತುಸು ಹೊತ್ತು ಮಾತನಾಡಲು ತೀರ್ಮಾನಿಸಿದೆ.

ಮೊದಲು ಕೌಟುಂಬಿಕ ವಿಚಾರವನ್ನು ಕೆದಕಿ ನಂತರ ನಾನು ಕೇಳಿದೆ, “ನಿಮ್ಮ ತಂದೆ ಈಗ ಜೀವಂತವಾಗಿಲ್ಲ ಎಂದು ಹೇಳಿದ್ದೀರಿ.”

“ಹೌದು! ಅವರು ಕೆಲವು ದಿನ ರೋಗಶಯ್ಯೆಯ-ಲ್ಲಿದ್ದು ನಿಧನರಾದರು.”

“ಸರಿ! ನಾನು ನಿಮ್ಮಲ್ಲೊಂದು ಪ್ರಶ್ನೆ ಕೇಳಲೇ? ಅವರು ನಿಧನರಾದರೆಂದು ನಿಮಗೆ ಖಾತ್ರಿಯಾದದ್ದು ಯಾವಾಗ?”

“ಅಂದರೆ...?”

“ನಾನೇ ಹೇಳುತ್ತೇನೆ. ಅವರ ಶ್ವಾಸ ನಿಂತಿತು ಎಂದು ಖಾತ್ರಿಯಾದಾಗ. ಅವರು ನಿಧನರಾದರೆಂದು ವೈದ್ಯರು ದೃಢಪಡಿಸಿದಾಗ. ಆದರೆ ಅದರ ನಂತರವೂ ಅವರ ಕೈಕಾಲು ಅಲುಗಾಡುತ್ತಿದ್ದರೆ ಅವರನ್ನು ನಿಧನರಾದರೆಂದು ಯಾರಾದರೂ ಹೇಳುವರೇ? ಖಂಡಿತ ಇಲ್ಲ. ಅವರು ನಿಧನರಾಗಿಲ್ಲ. ಅವರ ದೇಹದಲ್ಲಿ ಇನ್ನೂ ಪ್ರಾಣ ಇದೆಯೆಂದು ಹೇಳುತ್ತೇವೆ. ಇಂತಹ ಸ್ಥಿತಿಯಲ್ಲಿರುವ ವ್ಯಕ್ತಿಯನ್ನು ಅವರು ನಿಧನರಾಗಿದ್ದಾರೆ, ಅವರ ಅಂತ್ಯ ಸಂಸ್ಕಾರಕ್ಕೆ ತಯಾರಿ ಮಾಡಿರಿ ಎಂದು ಹೇಳಿದರೆ ನೀವದನ್ನು ಒಪ್ಪಿಕೊಳ್ಳುವಿರಾ?”

“ನಿಮ್ಮ ಮಾತು ನನಗೆ ಅರ್ಥವಾಗುತ್ತಿಲ್ಲ...”

“ವಿವರಿಸುತ್ತೇನೆ ಕೇಳಿ. ಅಲ್ಲ! ನೀವೇ ಯೋಚಿಸಿ ನೋಡಿ. ಅಜ್ಮೀರ್ ಖಾಜ, ಮುಹ್ಯುದ್ದೀನ್ ಶೈಖ್, ಬದ್ರ್ ಶುಹದಾ ಮುಂತಾದವರೆಲ್ಲರೂ ಮರಣಹೊಂದಿದ್ದಾರೆ. ಅವರು ಜೀವಂತವಿದ್ದಾಗ ಅವರಿಗೆ ಕಿವಿ, ಕಣ್ಣು, ಮಾತು, ನಡೆ, ಶ್ವಾಸ, ಉಸಿರು, ಎದೆ ಬಡಿತ ಎಲ್ಲವೂ ಇತ್ತು. ಮರಣಹೊಂದಿದಾಗ ಅವರು ಅವೆಲ್ಲವನ್ನೂ ಕಳಕೊಂಡರು. ಅವರನ್ನು ಕಬರ್‌ನಲ್ಲಿ ದಫನ ಮಾಡಲಾಯಿತು. ಆದರೆ ಈಗ ಅವರಿಗೆ ನಿಮ್ಮ ಕರೆ ಕೇಳಿಸುತ್ತದೆ ಎಂಬ ನಂಬಿಕೆಯಿಂದ ನೀವು ಅವರನ್ನು ಕರೆದು ಪ್ರಾರ್ಥಿಸುತ್ತೀರಿ. ಗೋರಿಯಲ್ಲಿ ದಫನ ಮಾಡಿದ ನಂತರವೂ ಅವರಿಗೆ ಜೀವಂತವಿದ್ದಾಗ ಇದ್ದ ಎಲ್ಲ ಸಾಮರ್ಥ್ಯಗಳೂ ಇರುತ್ತವೆಯೆಂದು ನಿಮಗೆ ಯಾರು ಹೇಳಿದ್ದು?”

“ಕುರ್‌ಆನಿನಲ್ಲಿ ಹಾಗೆ ಇದೆಯೆಂದು ನಮ್ಮ ಮುಲ್ಲಾಗಳು ಹೇಳುತ್ತಾರಲ್ಲವೇ?”

“ತಂಗಿ! ಕುರ್‌ಆನ್ ಹೇಳಿರುವುದು ಹಾಗೆ ಮಾಡಬಾರದೆಂದು!”

“ಹೌದಾ!?” ಆಕೆ ಆಶ್ಚರ್ಯದಿಂದ ಕಣ್ಣರಳಿಸಿ ಕೇಳಿದಳು.

“ಹೌದು! ಮರಣಹೊಂದಿದವರಿಗೆ ಕಿವಿ ಕೇಳುವುದಿಲ್ಲ. ಇನ್ನು ಕೇಳುತ್ತದೆಯೆಂದು ಒಪ್ಪಿಕೊಂಡರೂ ನಿಮ್ಮ ಕರೆಗೆ ಅವರು ಉತ್ತರಿಸುವುದಿಲ್ಲವೆಂದು ಅಲ್ಲಾಹು ಕುರ್‌ಆನಿನಲ್ಲಿ ಹೇಳಿದ್ದಾನೆ. ಮುಲ್ಲಾಗಳ ಮಾತನ್ನು ಕೇಳುವ ಮುಂಚೆ ಒಂದು ಬಾರಿಯಾದರೂ ನಿಮಗೆ ಕುರ್‌ಆನನ್ನು ಓದಬಹುದಲ್ಲವೇ? ದಯವಿಟ್ಟು ಇನ್ನಾದರೂ ಇಂತಹ ವಿಗ್ರಹಗಳನ್ನು ಮತ್ತು ಚಿತ್ರಗಳನ್ನು ತೊಲಗಿಸಿರಿ. ಗಂಡನಿಗೆ ವಿಷಯವನ್ನು ಸರಿಯಾಗಿ ತಿಳಿಸಿಕೊಟ್ಟು ಮನವರಿಕೆ ಮಾಡಿಸಿರಿ. ಹಿಂದೂ ಧರ್ಮದಲ್ಲಿದ್ದರೆ ಅವರಿಗೆ ವಿಗ್ರಹಾರಾಧನೆ ಮಾಡಬಹುದಿತ್ತು. ಆದರೆ ಇಸ್ಲಾಮ್ ಏಕದೇವಾರಾಧನೆಯ ಧರ್ಮ. ಇಸ್ಲಾಮ್ ಧರ್ಮದಲ್ಲಿ ವಿಗ್ರಹಾರಾಧನೆ ಸಲ್ಲದು ಎಂಬ ಮಾಹಿತಿ ಅವರಿಗೆ ಇಲ್ಲದಿರಬಹುದು.”

“ಹಾಗಾದರೆ ಮೃತ ಮಹಾತ್ಮರೊಡನೆ ಪ್ರಾರ್ಥಿಸುವುದು ವಿಗ್ರಹಾರಾಧನೆಗೆ ಸಮಾನವೇ?”

“ಖಂಡಿತ! ಅದರಲ್ಲಿ ಸಂಶಯವೇ ಇಲ್ಲ. ಮಹಾತ್ಮರಲ್ಲೇ ಅತಿದೊಡ್ಡ ಮಹಾತ್ಮರಾದ ಪ್ರವಾದಿ ಮುಹಮ್ಮದ್(ﷺ) ರೊಡನೆ ಪ್ರಾರ್ಥಿಸಿದರೂ ಅದು ವಿಗ್ರಹಾರಾಧನೆಯಾಗಿದೆ. ಅದು ಅಲ್ಲಾಹನೊಡನೆ ಸಹಭಾಗಿತ್ವ (ಶಿರ್ಕ್) ಮಾಡುವುದಾಗಿದೆ. ನಮ್ಮ ಮರಣಾನಂತರ ಶಾಶ್ವತವಾದ ಪರಲೋಕ ಜೀವನವಿದೆ. ಅಲ್ಲಿ ನಮ್ಮೆಲ್ಲರನ್ನೂ ಒಟ್ಟುಗೂಡಿಸಲಾಗುವುದು. ಅಲ್ಲಿ ನಮ್ಮ ವಿಚಾರಣೆ ನಡೆಯಲಿದೆ. ಅಲ್ಲಿ ನಿಮ್ಮ ಸಹಾಯಕ್ಕೆ ಯಾರೂ ಬರುವುದಿಲ್ಲ. ಅದಿರಲಿ... ನೀವು ದೇವಸ್ಥಾನಕ್ಕೆ ಹೋಗುತ್ತೀರಾ?”

“ಇಲ್ಲ... ನಾನು ಮುಸ್ಲಿಮ್!”

“ಅಲ್ಲಾಹನಲ್ಲಿ ಮಾತ್ರ ಪ್ರಾರ್ಥಿಸುವುದು ಮುಸಲ್ಮಾನನ ಪ್ರಥಮ ಮತ್ತು ಪ್ರಮುಖ ಕರ್ತವ್ಯ. ಅಲ್ಲಾಹನಲ್ಲಿ ಮಾತ್ರ ಪ್ರಾರ್ಥಿಸಬೇಕು. ಪ್ರವಾದಿ ಮುಹಮ್ಮದ್(ﷺ) ರ ಚರ್ಯೆಯನ್ನು ಹಿಂಬಾಲಿಸಬೇಕು.”

“ಅಲ್ಲಾಹನಲ್ಲಿ ಪ್ರಾರ್ಥಿಸಬೇಕು ಸರಿ. ನಾನು ಒಪ್ಪಿಕೊಳ್ಳುತ್ತೇನೆ. ಆದರೆ ಮಹಾತ್ಮರು ಅಲ್ಲಾಹನಿಗೆ ಹತ್ತಿರದಲ್ಲಿರುವವರಲ್ಲವೇ? ಅವರಲ್ಲಿ ಪ್ರಾರ್ಥಿಸಿದರೆ ಅಲ್ಲಾಹು ಬೇಗ ಉತ್ತರ ಕೊಡುತ್ತಾನಲ್ಲವೇ?”

“ಪ್ರವಾದಿ ಮುಹಮ್ಮದ್(ﷺ) ರಿಗಿಂತ ದೊಡ್ಡ ಮಹಾತ್ಮರು ಯಾರಿದ್ದಾರೆ? ಆದರೂ ಅವರಲ್ಲಿ ಪ್ರಾರ್ಥಿಸಬಾರದು. ಏಕೆಂದರೆ ಅದು ಶಿರ್ಕ್. ಅಲ್ಲಾಹು ಅದನ್ನು ವಿರೋಧಿಸಿದ್ದಾನೆ. ಸರ್ವಲೋಕಗಳನ್ನೂ ಸೃಷ್ಟಿಸಿ ಪರಿಪಾಲನೆ ಮಾಡುವವನು ಅಲ್ಲಾಹು. ಅವನು ಶಾಶ್ವತವಾಗಿ ಬದುಕಿರುವವರನು. ಅವನಿಗೆ ಸಾವಿಲ್ಲ. ಅವನು ನಮಗೆ ಅತ್ಯಂತ ಹತ್ತಿರದಲ್ಲಿದ್ದಾನೆ. ನನ್ನಲ್ಲಿ ಪ್ರಾರ್ಥಿಸಿರಿ, ನಾನು ನಿಮಗೆ ಉತ್ತರ ಕೊಡುತ್ತೇನೆಂದು ಅವನು ಪವಿತ್ರ ಕುರ್‌ಆನಿನಲ್ಲಿ ಹೇಳಿದ್ದಾನೆ. ಜೀವ ನೀಡುವುದು, ಸಾಯಿಸುವುದು, ರೋಗ

*46 ನೇ ಪುಟಕ್ಕೆ*

# ಹಿತವನ್ನು ತರುವುದಕ್ಕಿಂತಲೂ ಹಾನಿಯನ್ನು ತಡೆಗಟ್ಟಲು ಅಗ್ರಪ್ರಾಶಸ್ತ್ಯ ನೀಡಬೇಕು

ಇಸ್ಲಾಮೀ ಶಾಸನದ ಮೂಲ ಅಡಿಪಾಯವು ಹಿತವನ್ನುಂಟು ಮಾಡುವ ಕಾರ್ಯಗಳನ್ನು ತರುವುದು ಮತ್ತು ಹಾನಿಯನ್ನುಂಟು ಮಾಡುವ ಕಾರ್ಯಗಳನ್ನು ತಡೆಗಟ್ಟುವುದು ಎಂಬ ಆಧಾರದ ಮೇಲೆ ನಿರ್ಮಿತವಾಗಿರುವುದರಿಂದ, ಕುರ್‌ಆನ್ ಮತ್ತು ಸುನ್ನತ್ತಿನಲ್ಲಿ ಯಾವುದೇ ಪುರಾವೆಗಳನ್ನು ಕಾಣಲಾಗದ ಇಜ್ತಿಹಾದಿಗೆ ಸಂಬಂಧಿಸಿದ ಆಧುನಿಕ ಮಸ್‌ಅಲಗಳನ್ನು ವಿಶ್ಲೇಷಿಸುವಾಗ ಈ ತತ್ವದ ಬಗ್ಗೆ ವಿಶೇಷ ಗಮನ ಹರಿಸಬೇಕಾದುದು ಕಡ್ಡಾಯವಾಗಿದೆ.

دَرْءُ الْمَفَاسِدِ مُقَدَّمٌ عَلَى جَلْبِ الْمَصَالِحِ

"ಹಿತವನ್ನು ತರುವುದಕ್ಕಿಂತಲೂ ಹಾನಿಯನ್ನು ತಡೆಗಟ್ಟಲು ಅಗ್ರ-ಪ್ರಾಶಸ್ತ್ಯ ನೀಡಬೇಕು"

ಇದು ಇಸ್ಲಾಮೀ ಶಾಸನದ (ಶರೀಅತ್ತಿನ) ಒಂದು ತತ್ವ. ಕುರ್‌ಆನಿನ ಅನೇಕ ಆಯತ್‌ಗಳಲ್ಲಿ ಮತ್ತು ಸಹೀಹಾದ ಅನೇಕ ಹದೀಸ್‌ಗಳಲ್ಲಿ ಈ ತತ್ವವನ್ನು ಪ್ರಸ್ತಾಪಿಸಲಾಗಿದೆ.

ಅಲ್ಲಾಹು(ﷻ) ನಿಯಮ ಮತ್ತು ಶಾಸನಗಳನ್ನು ರಚಿಸಿರುವುದು ಮನುಷ್ಯರ ಹಿತಕ್ಕಾಗಿ. ಆ ನಿಯಮ ಅಥವಾ ಶಾಸನ ಆದೇಶದ ರೂಪದಲ್ಲಿರಬಹುದು, ಅಥವಾ ವಿರೋಧದ ರೂಪದಲ್ಲಿರಬಹುದು. ಹಾಗೆಯೇ ಅದು ಐಹಿಕ ಹಿತಕ್ಕಾಗಿರಬಹುದು ಅಥವಾ ಪಾರಲೌಕಿಕ ಹಿತಕ್ಕಾಗಿರಬಹುದು.

ಮನುಷ್ಯರಿಗೆ ಹಿತಕರವಾಗಿರುವ ವಿಷಯವನ್ನಲ್ಲದೆ ಇನ್ನೇನನ್ನೂ ಅಲ್ಲಾಹು(ﷻ) ಆದೇಶಿಸುವುದಿಲ್ಲ. ಅದೇ ರೀತಿ ಮನುಷ್ಯರಿಗೆ ಹಾನಿಕರವಾಗಿರುವ ವಿಷಯವನ್ನಲ್ಲದೆ ಇನ್ನೇನನ್ನೂ ಅಲ್ಲಾಹು(ﷻ) ವಿರೋಧಿಸುವುದಿಲ್ಲ. ಯಾವ ಉದ್ದೇಶಕ್ಕಾಗಿ ಅಲ್ಲಾಹು ಅವನ ಪ್ರವಾದಿಗಳನ್ನು ಕಳುಹಿಸಿದನೋ ಆ ಉದ್ದೇಶವು ಇದೇ ಆಗಿದೆ.

ಅಲ್ಲಾಹು(ﷻ) ಹೇಳುತ್ತಾನೆ:

﴿وَمَآ أَرْسَلْنَٰكَ إِلَّا رَحْمَةً لِّلْعَٰلَمِينَ ١٠٧﴾

"ಸರ್ವಲೋಕದವರಿಗೆ ಒಂದು ದಯೆಯಾಗಿಯಲ್ಲದೆ ನಾವು ತಮ್ಮನ್ನು ಕಳುಹಿಸಿಲ್ಲ." (ಕುರ್‌ಆನ್ 21:107)

ಆದ್ದರಿಂದ ಇಸ್ಲಾಮೀ ಶಾಸನದ (ಶರೀಅತ್ತಿನ) ಆಳಕ್ಕೆ ಜಿಗಿದು ಅಧ್ಯಯನ ಮಾಡುವ ಯಾರಿಗೇ ಆದರೂ ಇಸ್ಲಾಮೀ ಶಾಸನವು ಶುದ್ಧ ಒಳಿತಲ್ಲದೆ ಇನ್ನೇನೂ ಅಲ್ಲವೆಂದು ಕಂಡುಬರದೆ ಇರಲಾರದು. ಆದರೆ ಈ ಒಳಿತನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕಾದರೆ ಈ ತತ್ವವನ್ನು ಸರಿಯಾಗಿ ಮನದಟ್ಟು ಮಾಡಿಕೊಳ್ಳಬೇಕಾದ ಅಗತ್ಯವಿದೆ.

ಈ ಕಾರಣದಿಂದಲೇ ಅಲ್ಲಾಹು(ﷻ) ಯಾವುದಾದರೂ ವಿಷಯವನ್ನು ಆದೇಶಿಸುವುದಾದರೆ ಅಥವಾ ಯಾವುದಾದರೂ

ವಿಷಯವನ್ನು ವಿರೋಧಿಸುವುದಾದರೆ ಆ ಆದೇಶ ಅಥವಾ ವಿರೋಧಕ್ಕೆ ತಲೆಬರಹದ ರೂಪದಲ್ಲಿ "ಮನುಷ್ಯ ಹಿತಕ್ಕಾಗಿ" ಎಂಬ ಕಾರಣವನ್ನು ನೀಡುವುದನ್ನು ನಮಗೆ ಕಾಣಬಹುದು. ಉದಾಹರಣೆಗೆ ಅಲ್ಲಾಹು(ﷻ), ಹೇಳುತ್ತಾನೆ:

﴿لَعَلَّكُمْ تَتَّقُونَ ١٧٩﴾

"ನೀವು ಭಯಭಕ್ತಿಯಿಂದ ಜೀವಿಸುವುದಕ್ಕಾಗಿ." (ಕುರ್‌ಆನ್ 2:179)

﴿لَعَلَّكُمْ تَذَكَّرُونَ ١٥٢﴾

"ನೀವು ಉಪದೇಶ ಪಡೆಯುವುದಕ್ಕಾಗಿ." (ಕುರ್‌ಆನ್ 6:152)

﴿هُوَ أَزْكَىٰ لَكُمْ﴾

"ಅದು ನಿಮಗೆ ಅತ್ಯಂತ ಪರಿಶುದ್ಧವಾಗಿದೆ." (ಕುರ್‌ಆನ್ 24:28)

ಇಂತಹ ಇನ್ನೂ ಅನೇಕ ಆಯತ್‌ಗಳನ್ನು ಕುರ್‌ಆನಿನಲ್ಲಿ ಕಾಣಬಹುದು. ಆದ್ದರಿಂದ ಈ ತತ್ವವನ್ನು ಸರಿಯಾಗಿ ಕಲಿಯುವ ವ್ಯಕ್ತಿಗೆ ಇಸ್ಲಾಮೀ ಶಾಸನದ ಮಹಾತ್ಮೆಯನ್ನು ದೃಢವಾಗಿ ಅರ್ಥ-ಮಾಡಿಕೊಳ್ಳಲು ಸಾಧ್ಯ.

ಇಸ್ಲಾಮೀ ಶಾಸನದ ಮೂಲ ಅಡಿಪಾಯವು ಹಿತವನ್ನುಂಟು ಮಾಡುವ ಕಾರ್ಯಗಳನ್ನು ತರುವುದು ಮತ್ತು ಹಾನಿಯನ್ನುಂಟು ಮಾಡುವ ಕಾರ್ಯಗಳನ್ನು ತಡೆಗಟ್ಟುವುದು ಎಂಬ ಆಧಾರದ ಮೇಲೆ ನಿರ್ಮಿತವಾಗಿರುವುದರಿಂದ, ಕುರ್‌ಆನ್ ಮತ್ತು ಸುನ್ನ-ತ್ತಿನಲ್ಲಿ ಯಾವುದೇ ಪುರಾವೆಗಳನ್ನು ಕಾಣಲಾಗದ ಇಜ್ತಿಹಾದಿಗೆ ಸಂಬಂಧಿಸಿದ ಆಧುನಿಕ ಮಸ್‌ಅಲಗಳನ್ನು ವಿಶ್ಲೇಷಿಸುವಾಗ ಈ ತತ್ವದ ಬಗ್ಗೆ ವಿಶೇಷ ಗಮನ ಹರಿಸಬೇಕಾದುದು ಕಡ್ಡಾಯವಾಗಿದೆ.

## ಈ ತತ್ವದ ಆಧಾರಗಳು:

"ಹಿತವನ್ನು ತರುವುದಕ್ಕಿಂತಲೂ ಹಾನಿಯನ್ನು ತಡೆಗಟ್ಟಲು ಅಗ್ರಪ್ರಾಶಸ್ತ್ಯ ನೀಡಬೇಕು" ಎಂಬ ಈ ತತ್ವಕ್ಕೆ ಪವಿತ್ರ ಕುರ್‌ಆನಿ-ನಲ್ಲಿ ಅನೇಕ ಆಧಾರಗಳನ್ನು ಕಾಣಬಹುದು. ಉದಾಹರಣೆಗೆ, ಅಲ್ಲಾಹು(ﷻ) ಹೇಳುತ್ತಾನೆ:

﴿وَمَا أَرْسَلْنَاكَ إِلَّا رَحْمَةً لِّلْعَالَمِينَ ١٠٧﴾

"ಸರ್ವಲೋಕದವರಿಗೆ ಒಂದು ದಯೆಯಾಗಿಯಲ್ಲದೆ ನಾವು ತಮ್ಮನ್ನು ಕಳುಹಿಸಿಲ್ಲ." (ಕುರ್‌ಆನ್ 21:107)

ಇಹಲೋಕ ಮತ್ತು ಪರಲೋಕದಲ್ಲಿ ಮನುಷ್ಯರಿಗೆ ಹಿತವನ್ನು ತರುವ ಕಾರ್ಯಗಳನ್ನು ಯಾವುವು ಎಂದು ತಿಳಿಸಿಕೊಡುವುದು ಈ ದಯೆಯಲ್ಲಿ ಒಳಪಡುತ್ತದೆ.

ಹಾಗೆಯೇ ಅಲ್ಲಾಹು(ﷻ) ಹೇಳುತ್ತಾನೆ.

﴿إِنَّ اللَّهَ يَأْمُرُ بِالْعَدْلِ وَالْإِحْسَانِ﴾

"ಅಲ್ಲಾಹು ನ್ಯಾಯ ಮತ್ತು ಒಳಿತನ್ನು ಮಾಡುವಂತೆ ಆದೇಶಿಸು-ತ್ತಾನೆ." (ಕುರ್‌ಆನ್ 16:90)

ಅಲ್ಲಾಹು(ﷻ) ಹೇಳುತ್ತಾನೆ:

﴿قُلْ إِنَّ اللَّهَ لَا يَأْمُرُ بِالْفَحْشَاءِ﴾

"ಹೇಳಿರಿ. ಅಲ್ಲಾಹು ಅಶ್ಲೀಲವಾಗಿರುವುದನ್ನು ಆದೇಶಿಸುವುದಿ-ಲ್ಲ." (ಕುರ್‌ಆನ್ 7:28)

ಅಲ್ಲಾಹು(ﷻ) ಹೇಳುತ್ತಾನೆ:

﴿وَيُحِلُّ لَهُمُ الطَّيِّبَاتِ وَيُحَرِّمُ عَلَيْهِمُ الْخَبَائِثَ﴾

"ಅವರು (ಪ್ರವಾದಿಯವರು) ಅವರಿಗೆ ಉತ್ತಮವಾದುದನ್ನು ಸಮ್ಮ-ತಿಸುತ್ತಾರೆ ಮತ್ತು ಹೊಲಸಾಗಿರುವುದನ್ನು ವಿರೋಧಿಸುತ್ತಾರೆ." (ಅಲ್‌ಅಅ್‌ರಾಫ್ 157)[1]

ಅಲ್ಲಾಹು(ﷻ) ಹೇಳುತ್ತಾನೆ:

﴿يَا أَيُّهَا الَّذِينَ آمَنُوا اسْتَجِيبُوا لِلَّهِ

1 ಶರ್ಹ್ ಮನ್‌ಝೂಮತಿಲ್ ಕವಾಇದಿಲ್ ಫಿಕ್‌ಹಿಯ್ಯ ಪುಟ 21

﴿وَلِلرَّسُولِ إِذَا دَعَاكُمْ لِمَا يُحْيِيكُمْ﴾

"ಓ ಸತ್ಯವಿಶ್ವಾಸಿಗಳೇ! ನಿಮಗೆ ಜೀವ ನೀಡುವ ವಿಷಯದ ಕಡೆಗೆ ಅಲ್ಲಾಹು ಮತ್ತು ಅವನ ರಸೂಲರು ಕರೆಯುವಾಗ ಅವರಿಗೆ ಉತ್ತರ ನೀಡಿರಿ." (ಕುರ್‌ಆನ್ 8:24)

ಅಲ್ಲಾಹು(ﷻ) ಹೇಳುತ್ತಾನೆ:

﴿مَنْ عَمِلَ صَٰلِحًا مِّن ذَكَرٍ أَوْ أُنثَىٰ وَهُوَ مُؤْمِنٌ فَلَنُحْيِيَنَّهُۥ حَيَوٰةً طَيِّبَةً وَلَنَجْزِيَنَّهُمْ أَجْرَهُم بِأَحْسَنِ مَا كَانُوا۟ يَعْمَلُونَ ﴿٩٧﴾﴾

"ಗಂಡಾಗಲಿ, ಹೆಣ್ಣಾಗಲಿ ಯಾರು ಸತ್ಯವಿಶ್ವಾಸಿಯಾಗಿದ್ದು ಸತ್ಕರ್ಮವೆಸಗುತ್ತಾರೋ ಅವರಿಗೆ ನಾವು ಅತ್ಯುತ್ತಮವಾದ ಜೀವನವನ್ನು ದಯಪಾಲಿಸುವೆವು. ಅವರು ಮಾಡಿರುವ ಅತ್ಯುತ್ತಮ ಕರ್ಮಗಳ ಆಧಾರದಲ್ಲಿ ನಾವು ಅವರಿಗೆ ಅವರ ಪ್ರತಿಫಲವನ್ನು ನೀಡುವೆವು." (ಕುರ್‌ಆನ್ 16:97)

﴿وَٱللَّهُ لَا يُحِبُّ ٱلْفَسَادَ ﴿٢٠٥﴾﴾

"ಅಲ್ಲಾಹು ಕ್ಷೋಭೆಯನ್ನು ಇಷ್ಟಪಡುವುದಿಲ್ಲ." (ಕುರ್‌ಆನ್ 2:205)

﴿يُرِيدُ ٱللَّهُ بِكُمُ ٱلْيُسْرَ وَلَا يُرِيدُ بِكُمُ ٱلْعُسْرَ﴾

"ಅಲ್ಲಾಹು ನಿಮಗೆ ಸುಲಭವಾಗಿರುವುದನ್ನು ಉದ್ದೇಶಿಸುತ್ತಾನೆಯೇ ವಿನಾ ಕಷ್ಟವಾಗಿರುವುದನ್ನು ಉದ್ದೇಶಿಸುವುದಿಲ್ಲ." (2:185)

ಇಂತಹ ಇನ್ನೂ ಅನೇಕ ಆಯತ್‌ಗಳನ್ನು ಕುರ್‌ಆನಿನಲ್ಲಿ ಕಾಣಬಹುದು.

## ಹಿತ ಮತ್ತು ಹಾನಿ ಎಂಬ ಶಬ್ದಗಳ ವ್ಯಾಖ್ಯಾನ

### ಹಿತ ಎಂಬ ಶಬ್ದದ ಅರ್ಥ:

'ಹಿತ' ಭಾಷಿಕ ಅರ್ಥದಲ್ಲಿ:

ಹಿತ (ಮಸ್ಲಹ) ಎಂಬ ಶಬ್ದವು ಸಲಹ—ಯಸ್ಲಹು ಎಂಬ ಕ್ರಿಯೆಯಿಂದ ಉದ್ಭವವಾಗಿದೆ. ಇದು ಫಸಾದ್ (ಹಾನಿ, ಕ್ಷೋಭೆ) ಮತ್ತು ಮಫ್ಸದ್ (ಅಹಿತ, ಕೆಡುಕು) ಎಂಬ ಶಬ್ದಕ್ಕೆ ವಿರುದ್ಧವಾಗಿದೆ.[2]

ಹಿತ ಎನ್ನುವುದು ಸುಧಾರಣೆಯ ಫಲಿತಾಂಶಗಳಲ್ಲಿ ಸೇರಿದ ಒಂದು ಪರಿಣಾಮವಾಗಿದೆ.[3] ಇದು ರಚನೆ ಮತ್ತು ಅರ್ಥದಲ್ಲಿ ಮನ್‌ಫಅ (المنفعة) (ಪ್ರಯೋಜನ) ಎಂಬ ಶಬ್ದಕ್ಕೆ ಸಮಾನ. ಆದ್ದರಿಂದ ಇದು ಸಲಾಹ್ (الصلاح) (ಹಿತ, ಒಳಿತು, ಸುಧಾರಣೆ) ಎಂಬ ಅರ್ಥದಲ್ಲಿರುವ ಕ್ರಿಯಾಧಾತುವಾಗಿದೆ.[4]

ಇದು ಹಿತ ಎಂಬ ಶಬ್ದದ ಅತ್ಯಂತ ಸ್ಪಷ್ಟವಾದ ಅರ್ಥ. ಹಿತ ಎಂದರೆ ವಿಶೇಷ ರೂಪದಲ್ಲಿ ಪ್ರಯೋಜನ ಮತ್ತು ಲಾಭವನ್ನು ಪಡೆಯುವುದು. ಇದು ಕೆಡುಕು ಮತ್ತು ಹಾನಿಯ ವಿರುದ್ಧಪದವಾಗಿದೆ.[5]

ಶೈಖ್ ಅತ್ತಾಹಿರ್ ಇಬ್ನ್ ಆಶೂರ್ ಹೇಳುತ್ತಾರೆ.

أَمَّا الْمَصْلَحَةُ فَهِيَ كَاسْمِهَا شَيْءٌ فِيهِ صَلَاحٌ قَوِيٌّ. وَلِذَلِكَ اشْتُقَّتْ لَهَا صِيغَةُ الْمَفْعَلَةِ الدَّالَّةُ عَلَى اسْمِ الْمَكَانِ الَّذِي يَكْثُرُ فِيهِ مَا مِنْهُ اشْتِقَاقُهُ. وَهُوَ هُنَا مَكَانٌ مَجَازِيٌّ.

"ಹಿತ ಎಂದರೆ ಅದರ ಹೆಸರೇ ಹೇಳುವಂತೆ ತೀವ್ರ ರೂಪದ ಒಳಿತು ಅಥವಾ ಹಿತವನ್ನು ಹೊಂದಿರುವ ವಸ್ತು. ಈ ಕಾರಣದಿಂದಲೇ ಇದು 'ಮಫ್‌ಅಲ' ಎಂಬ ರಚನೆಯಿಂದ ಉದ್ಭವವಾಗಿದೆ. ಈ ರಚನೆಯು ಇದರಿಂದ ಉದ್ಭವವಾಗುವ ಶಬ್ದವು ಹೆಚ್ಚಾಗಿ ಬಳಕೆಯಾಗುವ ಸ್ಥಳನಾಮವನ್ನು ಸೂಚಿಸುತ್ತದೆ. ಇಲ್ಲಿ ಈ ಸ್ಥಳವು ಆಲಂಕಾರಿಕವಾಗಿದೆ."[6]

## ಹಿತ ವಿದ್ವಾಂಸರ ಪಾರಿಭಾಷಿಕ ಅರ್ಥದ ಪ್ರಕಾರ:

'ಹಿತ' (المصلحة) ಎಂಬ ಶಬ್ದಕ್ಕೆ ವಿದ್ವಾಂಸರು ಅನೇಕ ಅರ್ಥಗಳನ್ನು ನೀಡಿದ್ದಾರೆ. ಅವುಗಳಲ್ಲಿ ಕೆಲವು ಹೀಗಿವೆ:

2 ಲಿಸಾನುಲ್ ಅರಬ್ 7/384 ಅಲ್‌ಕಾಮೂಸುಲ್ ಮುಹೀತ್ ಪುಟ 229
3 ಮನಾಹಿಜುಲಿಜ್ತಿಹಾದ್ ಫಿಲ್ ಇಸ್ಲಾಮ್ ಪುಟ 280
4 ದವಾಬಿತುಲ್ ಮಸ್ಲಹ ಫಿ ಶ್ಯರೀಅತಿಲ್ ಇಸ್ಲಾಮಿಯ್ಯ ಪುಟ 27. ಅಸರುಲ್ ಅದಿಲ್ಲತಿಲ್ ಮುಖ್ತಲಿಫಿ ಫೀಹಾ ಫಿಲ್ ಫಿಕ್‌ಹಿಲ್ ಇಸ್ಲಾಮೀ ಪುಟ 28.
5 ಅಲ್‌ಮಿಸ್ಬಾಹುಲ್ ಮುನೀರ್ ಪುಟ 543.
6 ಮಕಾಸಿದು ಶ್ಯರೀಅತಿಲ್ ಇಸ್ಲಾಮಿಯ್ಯ ಪುಟ 278

ಫಖ್ರು ರ್‍ರಾಝಿಯವರು ನೀಡಿದ ಅರ್ಥ:

“ಹಿತ ಎಂದರೆ ಐದು ಅನಿವಾರ್ಯ ಘಟಕಗಳನ್ನು (ಧರ್ಮ, ಆತ್ಮ, ಮಾನ, ವಂಶ ಮತ್ತು ಬುದ್ಧಿ) ಸಂರಕ್ಷಿಸಲು ಯುಕ್ತಿಪೂರ್ಣನಾದ ಶಾಸನಕರ್ತನು ಉದ್ದೇಶಿಸಿದ ಪ್ರಯೋಜನ. ಇಲ್ಲಿ ಪ್ರಯೋಜನ ಎಂದರೆ ಆನಂದ ಅಥವಾ ಆನಂದದ ಕಡೆಗೆ ಒಯ್ಯುವ ಮಾಧ್ಯಮ ಅಥವಾ ನೋವು ನಿವಾರಕ ಅಥವಾ ನೋವನ್ನು ನಿವಾರಿಸುವುದರ ಕಡೆಗೆ ಒಯ್ಯುವ ಮಾಧ್ಯಮ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಹಿತ ಎಂದರೆ ಗಳಿಸುವ ಮೂಲಕ ಅಥವಾ ನೆಲೆನಿಲ್ಲಿಸುವ ಮೂಲಕ ಸಿಗುವ ಆನಂದ. ಗಳಿಸುವ ಮೂಲಕ ಎಂದರೆ ಆನಂದವನ್ನು ನೇರವಾಗಿ ಪಡೆಯುವ ಮೂಲಕ. ನೆಲೆನಿಲ್ಲಿಸುವ ಮೂಲಕ ಎಂದರೆ ಹಾನಿಗಳನ್ನು ಅಥವಾ ಹಾನಿಗೆ ಕಾರಣವಾಗುವವುಗಳನ್ನು ತಡೆಗಟ್ಟುವ ಮೂಲಕ ಆನಂದವನ್ನು ನೆಲೆನಿಲ್ಲಿಸುವುದು.”[7]

ಅಲ್‌ಗಝ್ಝಾಲಿಯವರು ನೀಡಿದ ಅರ್ಥ:

“ಸೃಷ್ಟಿಗಳ ವಿಷಯದಲ್ಲಿ ಶಾಸನಕರ್ತನು (ಅಲ್ಲಾಹು) ಉದ್ದೇಶಿಸುವ ಸಂರಕ್ಷಣೆ ಐದು ವಿಧದಲ್ಲಿದೆ. ಅವು ಅವರ ಧರ್ಮ, ಆತ್ಮ, ಮಾನ, ವಂಶ ಮತ್ತು ಬುದ್ಧಿಯನ್ನು ಸಂರಕ್ಷಿಸುವುದು. ಈ ಐದು ಮೂಲ ಘಟಕಗಳನ್ನು ಸಂರಕ್ಷಿಸಲು ಏನನ್ನೆಲ್ಲ ಬೇಕಾಗುತ್ತದೋ ಅವೆಲ್ಲವೂ ‘ಹಿತ’ಗಳು. ಈ ಐದು ಮೂಲ ಘಟಕಗಳ ಸಂರಕ್ಷಣೆ ತಪ್ಪಿಹೋಗು-ವುದೆಲ್ಲವೂ ‘ಹಾನಿ’ಗಳು. ಆ ಹಾನಿಗಳನ್ನು ನಿವಾರಿಸುವ ಕಾರ್ಯ-ಗಳೆಲ್ಲವೂ ‘ಹಿತಗಳು’.”[8]

ನಜ್ಮುದ್ದೀನ್ ಅತ್ತೂಫೀ ಹೇಳುತ್ತಾರೆ.

“‘ಹಿತ’ ಎಂದರೆ ಸೃಷ್ಟಿಗಳಿಂದ ಹಾನಿಗಳನ್ನು ದೂರೀಕರಿ-ಸಬೇಕೆಂಬ ಶಾಸನಕರ್ತನ (ಅಲ್ಲಾಹನ) ಉದ್ದೇಶವನ್ನು ಪೂರ್ತಿಗೊಳಿಸುವ ಮಾರ್ಗ.”[9]

ಶರ್ಹು ಮುಖ್ತಸರಿಬ್ನಿ ಹಾಜಿಬ್ ಎಂಬ ಗ್ರಂಥದಲ್ಲಿ ಅದುದುದ್ದೀನ್ ಅಲ್‌ಈಜೀ ಹೇಳುತ್ತಾರೆ.

“‘ಹಿತ’ ಎಂದರೆ ಆನಂದ ಮತ್ತು ಅದಕ್ಕಿರುವ ಮಾಧ್ಯಮ.”

ಇನ್ನೊಂದು ಕಡೆ ಅವರು ಅದನ್ನು “ನೈಸರ್ಗಿಕ ಹೊಂದಾಣಿಕೆ” ಯೆಂದು ಕರೆದಿದ್ದಾರೆ.

ಅಶ್ಶಾತಿಬೀ ತಮ್ಮ ‘ಅತ್ತಅ್‌ರೀಫ್’ ಎಂಬ ಗ್ರಂಥದಲ್ಲಿ ಅನೇಕ ಕಡೆ ಈ ರೀತಿ ಅರ್ಥ ಹೇಳಿದ್ದಾರೆ.

“ಅದು ಮನುಷ್ಯರಿಗೆ ಮೊತ್ತವಾಗಿ ಅಥವಾ ನಿರ್ದಿಷ್ಟವಾಗಿ ಹಿತ ಅಥವಾ ಪ್ರಯೋಜನವನ್ನು ನೀಡುವ ಮತ್ತು ಜೀವನದ ಜಂಜಾಟದಲ್ಲಿ ಮನಸ್ಸಿಗೆ ತೀವ್ರ ಹೊಂದಾಣಿಕೆಯನ್ನು ಉಂಟು ಮಾಡುವ ಕಾರ್ಯ.”[10]

ಅಲ್‌ಗಝ್ಝಾಲಿ ಮತ್ತು ಅರ್‍ರಾಝಿಯವರು ನೀಡಿದ ಅರ್ಥದ ಪ್ರಕಾರ ‘ಹಿತ’ದ ಮೇಲೆ ನಿಯಮವನ್ನು ಸ್ಥಾಪಿಸಲು ಒಂದು ಷರತ್ತಿದೆ. ಆ ಷರತ್ತು ಏನೆಂದರೆ ಅದು ಶಾಸನಕರ್ತನು (ಅಲ್ಲಾಹು) ಉದ್ದೇಶಿಸುವ ‘ಹಿತ’ವಾಗಿರಬೇಕು. ಮನುಷ್ಯರು ಉದ್ದೇಶಿಸುವ ‘ಹಿತ’ದ ಮೇಲೆ ನಿಯಮವನ್ನು ಸ್ಥಾಪಿಸಲಾಗುವುದಿಲ್ಲ. ಏಕೆಂದರೆ ಮನುಷ್ಯರ ಹಿತವು ಸ್ವೇಚ್ಛೆ ಮತ್ತು ಸ್ವಾರ್ಥದ ಆಧಾರದಲ್ಲಿರುತ್ತದೆ.

ಉದಾಹರಣೆಗೆ: ಜಾಹಿಲೀ ಕಾಲದಲ್ಲಿ ಹೆಣ್ಣು ಶಿಶುಗಳನ್ನು ಜೀವಂತ ಹೂಳುವ ಸಂಪ್ರದಾಯವು ಜಾರಿಯಲ್ಲಿತ್ತು. ಆ ಕಾಲಘಟ್ಟದ ಜನರ ದೃಷ್ಟಿಯಲ್ಲಿ ಆ ಸಂಪ್ರದಾಯವು ‘ಹಿತ’ವಾಗಿತ್ತು. ಮನುಷ್ಯ ಹಿತಕ್ಕಾಗಿ ಎಂಬ ತಲೆಬರಹದಲ್ಲೇ ಆ ಸಮಾಜವು ಈ ಸಂಪ್ರದಾಯವನ್ನು ಅಂಗೀಕರಿಸಿತ್ತು. ಅವರ ಪ್ರಕಾರ ಹಿತ ಎಂದರೆ ಬಡತನ ನಿವಾರಣೆ, ಅಪಮಾನದಿಂದ ಪಾರಾಗುವುದು ಮತ್ತು ಅಪಮಾನಕ್ಕೆ ಒಳಪಡ-ದಿರುವುದು. ಈ ಹಿತಗಳ ಸಂರಕ್ಷಣೆಗಾಗಿ ಅವರು ಹೆಣ್ಣು ಶಿಶುವನ್ನು ಜೀವಂತ ಹೂಳುತ್ತಿದ್ದರು.[11] ಆದರೆ ಅಲ್ಲಾಹನ ಪ್ರಕಾರ ಇದು ಹಿತವಲ್ಲ. ಈ ಕಾರಣದಿಂದಲೇ ಈ ಸಂಪ್ರದಾಯವನ್ನು ತೀವ್ರವಾಗಿ ವಿರೋಧಿಸುತ್ತಾ ಅಲ್ಲಾಹು(ﷻ) ಹೇಳುತ್ತಾನೆ.

﴿ وَلَا تَقْتُلُوٓا۟ أَوْلَـٰدَكُمْ خَشْيَةَ إِمْلَـٰقٍ ۖ نَّحْنُ نَرْزُقُهُمْ وَإِيَّاكُمْ ۚ إِنَّ قَتْلَهُمْ كَانَ خِطْـًٔا كَبِيرًا ﴿٣١﴾ ﴾

“ಬಡತನವನ್ನು ಹೆದರಿ ನೀವು ನಿಮ್ಮ ಮಕ್ಕಳನ್ನು ಕೊಲ್ಲಬಾರದು. ಅವರಿಗೆ ಮತ್ತು ನಿಮಗೆ ಆಹಾರವನ್ನು ನೀಡುವವರು ನಾವು. ಖಂಡಿತವಾಗಿಯೂ ಅವರನ್ನು ಕೊಲ್ಲುವುದು ಮಹಾ ಅಪರಾಧ-ವಾಗಿದೆ.” (ಕುರ್‌ಆನ್ 17:31)

7 ಅಲ್‌ಮಹ್ಸೂಲ್ 2/218

8 ಅಲ್‌ಮುಸ್ತಸ್ಫಾ 1/287

9 ರಿಸಾಲತು ತ್ತೂಫೀ

10 ಮಕಾಸಿದು ಶ್ಶರೀಅತಿಲ್ ಇಸ್ಲಾಮಿಯ್ಯ ಪುಟ 278

11 ಅತ್ತಅ್‌ಲೀಲು ಬಿಲ್ ಮಸ್ಲಹತಿ ಇಂದಲ್ ಉಸೂಲಿಯ್ಯೀನ್ ಪುಟ 15

ಇನ್ನೊಂದು ಆಯತ್ತಿನಲ್ಲಿ ಅಲ್ಲಾಹು(ﷻ) ಹೇಳುತ್ತಾನೆ.

﴿ وَإِذَا بُشِّرَ أَحَدُهُم بِٱلْأُنثَىٰ ظَلَّ وَجْهُهُۥ مُسْوَدًّا وَهُوَ كَظِيمٌ ﴿٥٨﴾ يَتَوَٰرَىٰ مِنَ ٱلْقَوْمِ مِن سُوٓءِ مَا بُشِّرَ بِهِۦٓ ۚ أَيُمْسِكُهُۥ عَلَىٰ هُونٍ أَمْ يَدُسُّهُۥ فِى ٱلتُّرَابِ ۗ أَلَا سَآءَ مَا يَحْكُمُونَ ﴿٥٩﴾ ﴾

"ಅವರಲ್ಲಿ ಒಬ್ಬರಿಗೆ ಹೆಣ್ಣು ಮಗು ಹುಟ್ಟಿದೆಯೆಂಬ ಶುಭವಾರ್ತೆಯನ್ನು ತಿಳಿಸಲಾದರೆ ಅವನ ಮುಖವು ಕಪ್ಪಾಗುತ್ತದೆ. ಅವನು ಆ ಅಪಮಾನವನ್ನು ಅದುಮಿಡಲು ಪ್ರಯತ್ನಿಸುತ್ತಾನೆ. ತನಗೆ ತಿಳಿಸಲಾದ ಈ ಶುಭವಾರ್ತೆಯ ಕೆಡುಕಿನಿಂದ ಪಾರಾಗಲು ಅವನು ಜನರಿಂದ ಅಡಗಿಕೊಳ್ಳುತ್ತಾನೆ. ಅಪಮಾನವನ್ನು ಸಹಿಸಿ ಇದನ್ನು (ಶಿಶುವನ್ನು) ಇಟ್ಟುಕೊಳ್ಳಬೇಕೋ ಅಥವಾ ಮಣ್ಣಿನಲ್ಲಿ ಹೂತು ಹಾಕಬೇಕೋ ಎಂದು ಅವನು ಆಲೋಚಿಸುತ್ತಾನೆ. ಅವರು ಕೈಗೊಳ್ಳುವ ತೀರ್ಮಾನ ಬಹಳ ಕೆಟ್ಟದಾಗಿದೆ." (ಕುರ್‌ಆನ್ 16:59)

ಒಟ್ಟಿನಲ್ಲಿ, ನಿಯಮಶಾಸ್ತ್ರ ವಿದ್ವಾಂಸರು (ಉಸೂಲಿಗಳು) ಹಿತ ಎಂಬ ಶಬ್ದಕ್ಕೆ ನೀಡಿದ ವ್ಯಾಖ್ಯಾನಗಳು ಈ ಕೆಳಗೆ ವಿವರಿಸಿದ ಮೂರು ವಿಧಗಳಲ್ಲಿ ಒಳಗೊಳ್ಳುತ್ತದೆ.

1. ಹಿತ ಎಂದರೆ ಶಾಸನಕರ್ತನು (ಅಲ್ಲಾಹನು) ಉದ್ದೇಶಿಸಿದ ಉದ್ದೇಶದ ಕಡೆಗೆ ಒಯ್ಯುವ ಮಾರ್ಗ. ಇದು ಅಲ್‌ಗಝ್ಝಾಲಿಯವರ ಅಭಿಪ್ರಾಯ.
2. ಹಿತ ಎಂದರೆ ಶಾಸನಕರ್ತನ ಉದ್ದೇಶ. ಆಮದೀ ಮುಂತಾದ ಬಹುತೇಕ ನಿಯಮಶಾಸ್ತ್ರ ವಿದ್ವಾಂಸರು ಈ ಅಭಿಪ್ರಾಯವನ್ನು ಹೊಂದಿದ್ದಾರೆ.
3. ಹಿತ ಎಂದರೆ ಆನಂದ ಮತ್ತು ಸಂತೋಷ. ಇದು ಅಲ್‌ಇಝ್ಝ್ ಇಬ್ನ್ ಅಬ್ದಿಸ್ಸಲಾಮ್‌ರವರ ಅಭಿಪ್ರಾಯ.[12]

ಇದರ ಆಧಾರದಲ್ಲಿ ಹೇಳುವುದಾದರೆ, ನಿಯಮಶಾಸ್ತ್ರ ವಿದ್ವಾಂಸರ ಬಳಿ ಪರಿಚಿತವಾಗಿರುವ 'ಹಿತ' (المصلحة) ಎನ್ನುವುದು ನಿಯಮಗಳ ಪರಿಣಾಮವಾಗಿ ಉಂಟಾಗುವ ಯುಕ್ತಿ ಅಥವಾ ಉದ್ದೇಶವಾಗಿದೆ. ಉದಾಹರಣೆಗೆ, ಪ್ರತೀಕಾರ ಎಂಬ ನಿಯಮದ ಪರಿಣಾಮವಾಗಿ ಜೀವರಕ್ಷಣೆ ಎಂಬ ಉದ್ದೇಶ ಉಂಟಾಗುತ್ತದೆ.[13]

'ಹಿತ' ಎಂದರೆ ಸ್ವತಃ ಉದ್ದೇಶಗಳೇ ಆಗಿವೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ ಹಿತ ಎಂದರೆ ಒಂದು ನಿಯಮವನ್ನು ಶಾಸನವನ್ನಾಗಿ ಮಾಡಲು ಶಾಸನಕರ್ತನು (ಅಲ್ಲಾಹು) ಉದ್ದೇಶಿಸುವ ಉದ್ದೇಶವಾಗಿದೆ. ಉದ್ದೇಶ ಮತ್ತು ಹಿತ ಸ್ವತಂತ್ರವಾದ ಪರಸ್ಪರ ಸಂಬಂಧವಿಲ್ಲದ ವಸ್ತುಗಳಲ್ಲ. ಬದಲಾಗಿ ಅವೆರಡೂ ಪರಸ್ಪರ ಆವರ್ತಿಸುವ, ಒಂದನ್ನೊಂದು ಬೆಂಬಲಿಸುವ ವಸ್ತುಗಳು.[14]

ಹಿತ ಎನ್ನುವುದು ಶಾಸನಕರ್ತನ ಉದ್ದೇಶಗಳಿಂದ ಬೇರ್ಪಡದ ಅದರ ಒಂದು ಭಾಗವೆಂದು ಇದರಿಂದ ಸ್ಪಷ್ಟವಾಗುತ್ತದೆ.

## ಹಾನಿ ಎಂಬ ಶಬ್ದದ ಅರ್ಥ:

ಭಾಷಿಕ ಅರ್ಥದಲ್ಲಿ 'ಹಾನಿ' (المفسدة) ಎಂದರೆ ವಿನಾಶ (الفساد). ಇದು ಹಿತ (المصلحة) ಎಂಬ ಶಬ್ದದ ವಿರುದ್ಧಪದ.

ಅಲ್ಲಾಹು(ﷻ) ಹೇಳುತ್ತಾನೆ:

﴿ وَيَسْعَوْنَ فِى ٱلْأَرْضِ فَسَادًا ﴾

"ಅವರು ಭೂಮಿಯಲ್ಲಿ ವಿನಾಶವನ್ನು ಪ್ರಯತ್ನಿಸುತ್ತಾರೆ." (ಕುರ್‌ಆನ್ 5:33)

ಇಲ್ಲಿ ಫಸಾದನ್ (ವಿನಾಶವನ್ನು) ಎಂದು ಹೇಳಿರುವುದು ಅದು ಮಫ್‌ಊಲ್ ಲಹು ಆಗಿರುವುದರಿಂದ. ಅಂದರೆ ಇಲ್ಲಿಯ ಉದ್ದೇಶ ಅವರು ಭೂಮಿಯಲ್ಲಿ ವಿನಾಶ ಮಾಡಲು ಪ್ರಯತ್ನಿಸುತ್ತಾರೆ ಎಂದಾಗಿದೆ. ಮಫ್ಸದ (ಹಾನಿ) ಎಂಬ ಪದವು ಮಸ್ಲಹ (ಹಿತ) ಎನ್ನುವ ಪದಕ್ಕೆ ವಿರುದ್ಧವಾದುದು. ಅರಬ್ಬರು ಹೇಳುತ್ತಾರೆ:

هَذَا أَمْرٌ مَفْسَدَةٌ لِكَذَا

"ಈ ವಿಷಯವು ಇದಕ್ಕೆ ಹಾನಿಕರವಾಗಿದೆ." ಅಂದರೆ ಅದರಲ್ಲಿ ಹಾನಿಯಿದೆ ಎಂದರ್ಥ.[15]

12 ನೋಡಿ ಕವಾಇದುಲ್ ಅಹ್ಕಾಮ್ 1/12

13 ರಅ್‌ಯುಲ್ ಉಸೂಲಿಯ್ಯೀನ ಫೀ ಮಸ್ಲಹತಿಲ್ ಮುರ್ಸಲತಿ ಮಿನ್ ಹೈಸುಲ್ ಹುಜ್ಜಿಯ್ಯ ಪುಟ 26

14 ಅಲಿಜ್ತಿಹಾದು ಬೈನ ನ್ನಸ್ಸಿ ವಲ್ ವಾಕಿಅ್ ಪುಟ 112

15 ಲಿಸಾನುಲ್ ಅರಬ್ 335

**ಹಾನಿ ವಿದ್ವಾಂಸರ ಪಾರಿಭಾಷಿಕ ಅರ್ಥದ ಪ್ರಕಾರ:**

ಶೈಖ್ ಅತ್ತಾಹಿರ್ ಇಬ್ನ್ ಆಶೂರ್ ಹೇಳುತ್ತಾರೆ.

أَمَّا الْمَفْسَدَةُ فَهِيَ مَا قَابَلَ الْمَصْلَحَةَ. وَهِيَ وَصْفٌ لِلْفِعْلِ يَحْصُلُ بِهِ الْفَسَادُ، أَيْ الضَّرُّ، دَائِمًا أَوْ غَالِبًا لِلْجُمْهُورِ أَوْ لِلْآحَادِ.

"ಹಾನಿ ಎಂದರೆ ಹಿತಕ್ಕೆ ವಿರುದ್ಧವಾದುದು. ಅದು ಶಾಶ್ವತವಾಗಿ ಅಥವಾ ಹೆಚ್ಚಾಗಿ ಎಲ್ಲ ಜನರಿಗೂ ಅಥವಾ ಒಬ್ಬೊಬ್ಬರಿಗೆ ವಿನಾಶವನ್ನು ಅಂದರೆ ಹಾನಿಯನ್ನು ಉಂಟುಮಾಡುವ ಕ್ರಿಯೆಯ ಹೆಸರು."[16]

ಹಾನಿಗಳನ್ನು ವಿಶ್ಲೇಷಿಸುತ್ತಾ ಅದರ ನಿಜಾರ್ಥವನ್ನು ಅಲ್‌ಇಝ್ಝ್ ಇಬ್ನ್ ಅಬ್ದಿಸ್ಸಲಾಮ್ ಈ ರೀತಿ ಹೇಳುತ್ತಾರೆ.

"ಹಾನಿಗಳು ನಾಲ್ಕು ವಿಧಗಳಲ್ಲಿವೆ.

1. ನೋವು
2. ನೋವಿನ ಕಾರಣಗಳು
3. ದುಃಖ
4. ದುಃಖದ ಕಾರಣಗಳು

ಇವುಗಳನ್ನು ಐಹಿಕ ಮತ್ತು ಪಾರತ್ರಿಕ ಹಾನಿ ಎಂದು ವಿಭಾಗಿಸಬಹುದು. ನೋವು ಅಥವಾ ಯಾತನೆ ಎಂಬ ಶಬ್ದದ ಅರ್ಥ ಅಲ್ಲಾಹನ ಈ ಮಾತಿನಲ್ಲಿದೆ.

﴿وَلَهُمْ عَذَابٌ أَلِيمٌ﴾

"ಅವರಿಗೆ ಯಾತನಾಮಯ ಶಿಕ್ಷೆ ಕಾದಿದೆ." (ಕುರ್‌ಆನ್ 2:10)

ಇನ್ನೊಂದು ಕಡೆ ಅಲ್ಲಾಹು ಹೇಳುತ್ತಾನೆ:

﴿وَيَأْتِيهِ الْمَوْتُ مِن كُلِّ مَكَانٍ وَمَا هُوَ بِمَيِّتٍ﴾

"ಮರಣವು ಎಲ್ಲ ಕಡೆಗಳಿಂದಲೂ ಅವನ ಬಳಿಗೆ ಬರುವುದು. ಆದರೂ ಅವನು ಸಾಯಲಾರನು." (ಕುರ್‌ಆನ್ 14:17)

ದುಃಖ ಎಂಬ ಶಬ್ದದ ಅರ್ಥ ಅಲ್ಲಾಹನ ಈ ಮಾತಿನಲ್ಲಿದೆ.

﴿كُلَّمَا أَرَادُوا أَن يَخْرُجُوا مِنْهَا مِنْ غَمٍّ أُعِيدُوا فِيهَا﴾

"ಅವರು ದುಃಖವನ್ನು ತಡೆಯಲಾಗದೆ ಅದರಿಂದ ಹೊರಹೋಗಲು ಬಯಸುವಾಗಲೆಲ್ಲಾ ಪುನಃ ಅದಕ್ಕೇ ಮರಳಿಸಲ್ಪಡುವರು." (ಕುರ್‌ಆನ್ 22:22)[17]

ಹಾನಿಗಳಲ್ಲಿ ಕರಾಹತ್ ಆಗಿರುವ ಹಾನಿಗಳು ಮತ್ತು ಹರಾಮ್ ಆಗಿರುವ ಹಾನಿಗಳು ಎಂಬ ಎರಡು ವಿಧಗಳಿವೆ. ಹರಾಮ್ ಆಗಿರುವ ಹಾನಿಗಳಲ್ಲಿ ಹಿರಿಯ ಹಾನಿಗಳು ಮತ್ತು ಕಿರಿಯ ಹಾನಿಗಳು ಎಂಬ ವಿಧಗಳಿವೆ. ಅದು ಸ್ವತಃ ಅನೇಕ ಹಂತಗಳಾಗಿ ವ್ಯತ್ಯಾಸವಾಗುತ್ತದೆ.

## ತತ್ವದ ವಿವರಣೆ ಮತ್ತು ಅದನ್ನು ಅಳವಡಿಸುವ ವಿಧಾನ

**ತತ್ವದ ವಿವರಣೆ:**

دَرْءُ الْمَفَاسِدِ مُقَدَّمٌ عَلَى جَلْبِ الْمَصَالِحِ

"ಹಿತವನ್ನು ತರುವುದಕ್ಕಿಂತಲೂ ಹಾನಿಯನ್ನು ತಡೆಗಟ್ಟಲು ಅಗ್ರ-ಪ್ರಾಶಸ್ತ್ಯ ನೀಡಬೇಕು."

ಇಸ್ಲಾಮಿ ಕರ್ಮಶಾಸ್ತ್ರ ವಿದ್ವಾಂಸರು ಈ ತತ್ವವನ್ನು ಮೇಲೆ ಹೇಳಿದ ರೀತಿಯಲ್ಲಿ ಸ್ಥಿರಪಡಿಸಿದ್ದಾರೆ. ಏಕೆಂದರೆ ಯಾವ ಐದು ಉದ್ದೇಶಗಳನ್ನು ಅಥವಾ ಘಟಕಗಳನ್ನು (ಧರ್ಮ, ಆತ್ಮ, ಮಾನ, ವಂಶ ಮತ್ತು ಬುದ್ಧಿ) ಕಾಯಲು ಅಥವಾ ಸಂರಕ್ಷಿಸಲು ಇಸ್ಲಾಂ ಬಂದಿದೆಯೋ ಆ ಐದು ಉದ್ದೇಶ ಅಥವಾ ಘಟಕಗಳಲ್ಲೊಂದಕ್ಕೆ ಈ ಹಾನಿಯು ತೊಂದರೆಯನ್ನುಂಟು ಮಾಡುತ್ತದೆ. ಆದ್ದರಿಂದ ಹಿತವನ್ನುಂಟು ಮಾಡುವ ಕಾರ್ಯವನ್ನು ಕೈಗೆತ್ತಿಕೊಳ್ಳುವುದಕ್ಕೆ ಮೊದಲು ಹಾನಿಯನ್ನುಂಟು ಮಾಡುವ ಕಾರ್ಯವನ್ನು ತಡೆಗಟ್ಟಬೇಕಾಗಿದೆ.

16 ಮಕಾಸಿದು ಶ್ಶರೀಅತಿಲ್ ಇಸ್ಲಾಮಿಯ್ಯ ಪುಟ 279

17 ಕವಾಇದುಲ್ ಅಹ್ಕಾಮ್ ಫೀ ಮಸಾಲಿಹಿಲ್ ಅನಾಮ್ ಪುಟ 1/10

ಈ ತತ್ವವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದೆ ಇಸ್ಲಾಮ್ ಧರ್ಮದ ನಿಯಮಗಳನ್ನು ಅರ್ಥ ಮಾಡಿಕೊಳ್ಳಲು ಸಾಧ್ಯವಿಲ್ಲ.

ಇಸ್ಲಾಮ್ ಧರ್ಮದ ನಿಯಮಗಳೆಲ್ಲವೂ ಮೂರು ವಿಧದ ಹಿತಗಳನ್ನು ಕಾಯ್ದುಕೊಳ್ಳುತ್ತದೆ.

1. **ಹಾನಿಯನ್ನು ತಡೆಗಟ್ಟುವುದು:** ಇದಕ್ಕಾಗಿ ಧರ್ಮ, ಆತ್ಮ, ಸಂಪತ್ತು, ವಂಶ, ಮಾನ ಮತ್ತು ಬುದ್ಧಿ ಎಂಬ ಆರು ಘಟಕಗಳ ಸಂರಕ್ಷಣೆಯನ್ನು ಶಾಸನಬದ್ಧಗೊಳಿಸಲಾಗಿದೆ. ಈ ಆರು ಘಟಕಗಳಿಗೆ ಯಾವುದೇ ಹಾನಿಯಾಗುವುದನ್ನು ಇಸ್ಲಾಮ್ ವಿರೋಧಿಸುತ್ತದೆ. ಆದರೆ ಈ ಆರು ಘಟಕಗಳಿಗೆ ತೊಡಕಾಗುವ ಹಾನಿಗಳನ್ನು ಮಾತ್ರ ತಡೆಗಟ್ಟಿ ಆಂತರಿಕ ಮತ್ತು ಬಾಹ್ಯ ಇಬಾದತ್‌ಗಳ ಮೂಲಕ ಈ ಘಟಕಗಳನ್ನು ಪೋಷಿಸುವ ಮತ್ತು ಪೂರ್ತಿಗೊಳಿಸುವ ಕಾರ್ಯಗಳನ್ನು ನಿರ್ಲಕ್ಷಿಸುವವರ ಬಗ್ಗೆ ಶೈಖುಲ್ ಇಸ್ಲಾಮ್ ಇಬ್ನ್ ತೈಮಿಯ್ಯ ಕಿಡಿ ಕಾರಿದ್ದಾರೆ.
2. **ಹಿತವನ್ನು ತರುವುದು:** ಇದಕ್ಕಾಗಿ ಆರಾಧನೆ, ವ್ಯವಹಾರ ಮುಂತಾದ ವಿಷಯಗಳಲ್ಲಿ ಸಮುದಾಯಕ್ಕೆ ಉಂಟಾಗುವ ತೊಂದರೆಗಳನ್ನು ನಿವಾರಿಸುವ ನಿಯಮಗಳನ್ನು ಶಾಸನಬದ್ಧಗೊಳಿಸಲಾಗಿದೆ. ಇವುಗಳನ್ನು 'ಅಲ್‌ಹಾಜಿಯ್ಯಾತ್' ಎಂದು ಕರೆಯಲಾಗುತ್ತದೆ.
3. **ಉತ್ತಮ ಗುಣ-ನಡತೆ ಮತ್ತು ಉತ್ತಮ ಅಭ್ಯಾಸಗಳನ್ನು ಖಾತ್ರಿ ಪಡಿಸುವುದು:** ಇವುಗಳನ್ನು 'ಅತ್ತಹ್ಸೀನಿಯ್ಯಾತ್' ಎಂದು ಕರೆಯಲಾಗುತ್ತದೆ.

ಅಲ್‌ಇಝ್ಝ್ ಇಬ್ನ್ ಅಬ್ದಿಸ್ಸಲಾಮ್ ಹೇಳುತ್ತಾರೆ.

"ಇಸ್ಲಾಮೀ ಶಾಸನವು (ಶರೀಅತ್) ಸಂಪೂರ್ಣವಾಗಿ ಹಿತವಾಗಿದೆ. ಅದು ಒಂದೋ ಹಾನಿಗಳನ್ನು ತಡೆಗಟ್ಟುತ್ತದೆ ಅಥವಾ ಹಿತಗಳನ್ನು ತರುತ್ತದೆ. ಆದ್ದರಿಂದ ಅಲ್ಲಾಹು(ﷻ) "ಓ ಸತ್ಯವಿಶ್ವಾಸಿಗಳೇ!" ಎಂದು ಕರೆಯುವುದನ್ನು ಕೇಳಿದರೆ ಅದರ ಬಳಿಕ ಬರುವ ಅಲ್ಲಾಹನ ಉಪದೇಶವನ್ನು ಚಿಂತಿಸಿ ನೋಡಿರಿ. ಅದು ಒಂದೋ ನಿಮ್ಮನ್ನು ಒಳಿತಿನ ಕಡೆಗೆ ಪ್ರೇರೇಪಿಸುವ ಅಥವಾ ನಿಮ್ಮಿಂದ ಕೆಡುಕನ್ನು ನಿವಾರಿಸುವ ಅಥವಾ ಎರಡನ್ನೂ ಒಳಗೊಂಡಿರುವ ಕರೆಯಲ್ಲದೆ ಇನ್ನೇನೂ ಆಗಿರುವುದಿಲ್ಲ. ಅಲ್ಲಾಹು(ﷻ) ಅವನ ಗ್ರಂಥದಲ್ಲಿ ಹಾನಿಗೆ ಸಂಬಂಧಿಸಿದ ಕೆಲವು ನಿಯಮಗಳನ್ನು ವಿವರಿಸಿದ್ದಾನೆ. ಇದು ನೀವು ಆ ಹಾನಿಗಳಿಂದ ದೂರ ಸರಿಯಬೇಕೆಂದು ಪ್ರೇರೇಪಿಸುವುದಕ್ಕಾಗಿದೆ. ಹಾಗೆಯೇ ಹಿತಕ್ಕೆ ಸಂಬಂಧಿಸಿದ ಕೆಲವು ನಿಯಮಗಳನ್ನು ವಿವರಿಸಿದ್ದಾನೆ. ಇದು ನೀವು ಆ ಹಿತಗಳನ್ನು ಸ್ವಾಧೀನಪಡಿಸುವುದನ್ನು ಪ್ರೇರೇಪಿಸುವುದಕ್ಕಾಗಿದೆ."

ಈ ತತ್ವದ ಸರಿಯಾದ ಅರ್ಥವನ್ನು ಇಬ್ನು ನ್ನಜ್ಜಾರ್ ತಮ್ಮ 'ಅಲ್‌ಕೌಕಬುಲ್ ಮುನೀರ್' ಎಂಬ ಗ್ರಂಥದಲ್ಲಿ ಹೀಗೆ ವಿವರಿಸಿದ್ದಾರೆ.

"ಹಿತವನ್ನು ತರುವುದಕ್ಕಿಂತ ಹಾನಿಯನ್ನು ತಡೆಗಟ್ಟಲು ಅಗ್ರಪ್ರಾಶಸ್ತ್ಯ ನೀಡಬೇಕು. ಅದೇ ರೀತಿ ದೊಡ್ಡ ಹಾನಿಯನ್ನು ಚಿಕ್ಕ ಹಾನಿಯಿಂದ ತಡೆಗಟ್ಟುವುದಕ್ಕೂ ಕೂಡ. ಅಂದರೆ ಹಾನಿಯನ್ನುಂಟು ಮಾಡುವ ಕಾರ್ಯವನ್ನು ತಡೆಗಟ್ಟುವುದು ಅಥವಾ ಹಿತವನ್ನುಂಟು ಮಾಡುವ ಕಾರ್ಯವನ್ನು ಸ್ವೀಕರಿಸುವುದು ಎಂಬ ಎರಡು ವಿಷಯಗಳು ಒಟ್ಟಾಗಿ ಬಂದರೆ ಹಿತವನ್ನುಂಟು ಮಾಡುವ ಕಾರ್ಯವನ್ನು ಸ್ವೀಕರಿಸುವುದಕ್ಕಿಂತಲೂ ಹಾನಿಯನ್ನುಂಟು ಮಾಡುವ ಕಾರ್ಯವನ್ನು ತಡೆಗಟ್ಟುವುದಕ್ಕೆ ಅಗ್ರಪ್ರಾಶಸ್ತ್ಯ ನೀಡಬೇಕು. ಇನ್ನು ಹಾನಿಯನ್ನುಂಟು ಮಾಡುವ ಎರಡು ಕಾರ್ಯಗಳಲ್ಲಿ ಒಂದನ್ನು ತಡೆಗಟ್ಟಬೇಕಾಗಿ ಬಂದರೆ ದೊಡ್ಡ ಹಾನಿಯನ್ನುಂಟು ಮಾಡುವ ಕಾರ್ಯವನ್ನು ತಡೆಗಟ್ಟುವುದು ಹೆಚ್ಚು ಸೂಕ್ತವಾಗಿದೆ. ಇದು ಎಲ್ಲ ಬುದ್ಧಿವಂತರೂ ಒಪ್ಪಿಕೊಳ್ಳುವ ಸ್ಪಷ್ಟ ನಿಯಮವಾಗಿದ್ದು ವಿದ್ವಾಂಸರು ಈ ವಿಷಯದಲ್ಲಿ ಒಮ್ಮತಾಭಿಪ್ರಾಯವನ್ನು ಹೊಂದಿದ್ದಾರೆ."[18]

ಅಮೀರ್ ಹಾಜ್ ಹೇಳುತ್ತಾರೆ.

"ಇಸ್ಲಾಮೀ ಶಾಸನವು (ಶರೀಅತ್) ಹಿತವನ್ನುಂಟು ಮಾಡುವ ಕಾರ್ಯವನ್ನು ಸ್ವೀಕರಿಸುವುದಕ್ಕಿಂತಲೂ ಹಾನಿಯನ್ನುಂಟು ಮಾಡುವ ಕಾರ್ಯವನ್ನು ತಡೆಗಟ್ಟುವುದಕ್ಕೆ ಹೆಚ್ಚು ಕಾಳಜಿ ನೀಡುತ್ತದೆ. ಕಾರಣ, ಹಾನಿಯನ್ನುಂಟು ಮಾಡುವ ಎಲ್ಲ ಕಾರ್ಯಗಳನ್ನೂ ತಡೆಗಟ್ಟಬೇಕಾದುದು ಕಡ್ಡಾಯ. ಆದರೆ ಹಿತವನ್ನುಂಟು ಮಾಡುವ ಎಲ್ಲ ಕಾರ್ಯಗಳನ್ನೂ ಸ್ವೀಕರಿಸುವುದು ಕಡ್ಡಾಯವಲ್ಲ."[19]

ಈ ವಿಷಯವನ್ನು ಇಸ್ಲಾಮೀ ನಿಯಮಶಾಸ್ತ್ರವನ್ನು (ಉಸೂಲ್) ವಿವರಿಸುವ ಎಲ್ಲ ಗ್ರಂಥಗಳಲ್ಲೂ ಕಾಣಬಹುದು.

ಅಲ್‌ಅಸ್ನವೀ ತಮ್ಮ 'ತಖ್ರೀಜುಲ್ ಫುರೂಇ ಅಲಲ್ ಉಸೂಲ್' ಎಂಬ ಗ್ರಂಥದಲ್ಲಿ ಹೇಳುತ್ತಾರೆ.

"ಶಾಸನಕರ್ತನು ಹಿತವನ್ನುಂಟು ಮಾಡುವ ಕಾರ್ಯವನ್ನು ಸ್ವೀಕರಿಸುವುದಕ್ಕಿಂತಲೂ ಹೆಚ್ಚಿನ ಕಾಳಜಿಯನ್ನು ಹಾನಿಯನ್ನುಂಟು

18 ಶರ್ಹುಲ್ ಕೌಕಬಿಲ್ ಮುನೀರ್ 4/447

19 ಅತ್ತಕ್ರೀರು ವತ್ತಹ್ಬೀರು ಫೀ ಇಲ್ಮಿಲ್ ಉಸೂಲ್ 3/28

ಮಾಡುವ ಕಾರ್ಯವನ್ನು ತಡೆಗಟ್ಟುವುದಕ್ಕೆ ನೀಡಿದ್ದಾನೆ."[20]

ಅಲ್‌ಮುಸ್ವದ್ದದಲ್ಲಿ ಹೀಗೆ ಹೇಳಲಾಗಿದೆ.

"ಹಾನಿಯನ್ನುಂಟು ಮಾಡುವ ಕಾರ್ಯಗಳನ್ನು ಸಂಪೂರ್ಣವಾಗಿ ತೊರೆಯಬೇಕಾದುದು ಕಡ್ಡಾಯ. ಆದರೆ ಹಿತವನ್ನುಂಟು ಮಾಡುವ ಕಾರ್ಯಗಳು ಹಾಗಲ್ಲ. ಹಿತವನ್ನುಂಟು ಮಾಡುವ ಕಾರ್ಯಗಳಲ್ಲಿ ಅಗತ್ಯವಿರುವುದನ್ನು ಮಾತ್ರ ಸ್ವೀಕರಿಸಬೇಕು."[21]

## ಹಿತ ಮತ್ತು ಹಾನಿ ಪರಸ್ಪರ ವಿರುದ್ಧವಾಗಿದ್ದರೆ

ಹಿತವನ್ನುಂಟು ಮಾಡುವ ಕಾರ್ಯ ಮತ್ತು ಹಾನಿಯನ್ನುಂಟು ಮಾಡುವ ಕಾರ್ಯ ಪರಸ್ಪರ ವಿರುದ್ಧವಾಗಿದ್ದರೆ ಹಿತವನ್ನುಂಟು ಮಾಡುವ ಕಾರ್ಯವನ್ನು ಸ್ವೀಕರಿಸುವುದಕ್ಕಿಂತಲೂ ಹಾನಿಯನ್ನು ತಡೆಗಟ್ಟುವ ಕಾರ್ಯಕ್ಕೆ ಪ್ರಾಶಸ್ತ್ಯ ನೀಡಬೇಕು. ಈ ತತ್ವವನ್ನು ಪ್ರವಾದಿಯವರ(ﷺ) ಈ ವಚನವನ್ನು ಆಧರಿಸಿ ರಚಿಸಲಾಗಿದೆ.

«يَا عَائِشَـــةُ! لَوْ لَا أَنَّ قَوْمَكَ حَدِيثُ عَهْدِهِمْ بِكُفْرٍ لَنَقَضْتُ الْكَعْبَـــةَ فَجَعَلْتُ لَهَا بَابَيْـــنِ، بَابٌ يَدْخُلُ النَّاسُ وَبَابٌ يَخْرُجُونَ».

"ಓ ಆಯಿಶಾ! ನಿನ್ನ ಸಮುದಾಯದವರು ಹೊಸದಾಗಿ ಇಸ್ಲಾಮಿಗೆ ಬಂದವರಾಗಿರದಿದ್ದಲ್ಲಿ ನಾನು ಕಅ್‌ಬಾಲಯವನ್ನು ಒಡೆದು ಅದಕ್ಕೆ ಎರಡು ಬಾಗಿಲುಗಳನ್ನು ನಿರ್ಮಿಸುತ್ತಿದ್ದೆ. ಒಂದು ಬಾಗಿಲಿನ ಮೂಲಕ ಜನರು ಒಳಹೋಗಿ ಇನ್ನೊಂದು ಬಾಗಿಲಿನ ಮೂಲಕ ಹೊರಬರಲು."

ಈ ಹದೀಸನ್ನು ವ್ಯಾಖ್ಯಾನ ಮಾಡುತ್ತಾ ಅಲ್‌ಹಾಫಿಝ್ ಇಬ್ನ್ ಹಜರ್ ಹೇಳುತ್ತಾರೆ.

"ಹಾನಿಯುಂಟಾಗಬಹುದೆಂಬ ಭಯವಿದ್ದರೆ ಹಿತವನ್ನುಂಟು ಮಾಡುವ ಕಾರ್ಯವನ್ನು ಬಿಟ್ಟುಬಿಡಬೇಕು. ಒಬ್ಬ ವ್ಯಕ್ತಿ ಮಾಡುವ ದುಷ್ಕೃತ್ಯವನ್ನು ವಿರೋಧಿಸಿದರೆ ಆತ ಅದಕ್ಕಿಂತಲೂ ದೊಡ್ಡ ದುಷ್ಕೃತ್ಯದಲ್ಲಿ ತೊಡಗಬಹುದೆಂಬ ಭಯವಿದ್ದರೆ ಅದನ್ನು ವಿರೋಧಿಸಬಾರದು. ಪ್ರಜೆಗಳಿಗೆ ಪ್ರಯೋಜನವಿರುವ ವಿಷಯಗಳಲ್ಲಿ ಮಾತ್ರ ಆಡಳಿತಗಾರರು ಪ್ರಜೆಗಳನ್ನು ತೊಡಗಿಸಿಕೊಳ್ಳಬೇಕು. ಅದು ಕಡಿಮೆ ಶ್ರೇಷ್ಠತೆಯಿರುವ ವಿಷಯವಾಗಿದ್ದರೂ ಸಹ. ಆದರೆ ಅದು ನಿಷಿದ್ಧ ವಿಷಯವಾಗಿರಬಾರದು. ಇವು ಈ ಹದೀಸಿನ ಪ್ರಯೋಜನಗಳಾಗಿವೆ."[22]

ಈ ಹದೀಸನ್ನು ವ್ಯಾಖ್ಯಾನ ಮಾಡುತ್ತಾ ಅನ್ನವವಿ ಹೇಳುತ್ತಾರೆ.

"ಈ ಹದೀಸಿನಲ್ಲಿ ನಿಯಮಗಳ ಕೆಲವು ಅಡಿಸ್ಥಾನ ತತ್ವಗಳಿಗೆ ಪುರಾವೆಗಳಿವೆ. ಅವುಗಳಲ್ಲೊಂದು ಏನೆಂದರೆ, ಹಿತವನ್ನುಂಟು ಮಾಡುವ ಕಾರ್ಯಗಳು ಪರಸ್ಪರ ವಿರುದ್ಧವಾಗಿದ್ದರೆ ಅಥವಾ ಹಿತವನ್ನುಂಟು ಮಾಡುವ ಕಾರ್ಯ ಮತ್ತು ಹಾನಿಯನ್ನುಂಟು ಮಾಡುವ ಕಾರ್ಯ ಪರಸ್ಪರ ವಿರುದ್ಧವಾಗಿದ್ದು ಹಿತವನ್ನುಂಟು ಮಾಡುವ ಕಾರ್ಯವನ್ನು ಸ್ವೀಕರಿಸುವುದು ಮತ್ತು ಹಾನಿಯನ್ನುಂಟು ಮಾಡುವ ಕಾರ್ಯವನ್ನು ತಡೆಗಟ್ಟುವುದು ಎಂಬ ಈ ಎರಡು ವಿಷಯಗಳ ಮಧ್ಯೆ ಹೊಂದಾಣಿಕೆ ಮಾಡಲು ಸಾಧ್ಯವಾಗದಿದ್ದರೆ ಅವುಗಳಲ್ಲಿ ಅತಿದೊಡ್ಡ ಕಾರ್ಯದಿಂದ ಆರಂಭಿಸಬೇಕು. ಏಕೆಂದರೆ ಕಅ್‌ಬಾಲಯವನ್ನು ಒಡೆದು ಅದನ್ನು ಇಬ್ರಾಹೀಮ್ (عليه السلام) ರವರು ನಿರ್ಮಿಸಿದ ಪೂರ್ವಸ್ಥಿತಿಗೆ ತರುವುದು ಹಿತವನ್ನುಂಟು ಮಾಡುವ ಕಾರ್ಯವಾಗಿದೆ. ಆದರೆ ಆ ಹಿತಕ್ಕಿಂತಲೂ ದೊಡ್ಡ ಹಾನಿ ಅದರಲ್ಲಿದೆ. ಅಂದರೆ ಅದರಿಂದ ಹೊಸದಾಗಿ ಇಸ್ಲಾಮ್ ಸ್ವೀಕರಿಸಿದವರಲ್ಲಿ ಫಿತ್ನ ಉಂಟಾಗಬಹುದು. ಏಕೆಂದರೆ ಅವರು ಕಅ್‌ಬಾಲಯಕ್ಕೆ ಶ್ರೇಷ್ಠತೆ ಕಲ್ಪಿಸುತ್ತಿದ್ದರು ಮತ್ತು ಅದನ್ನು ಬದಲಾಯಿಸುವುದನ್ನು ಅವರು ಅಸಹ್ಯಪಡುತ್ತಿದ್ದರು. ಆದ್ದರಿಂದ ಪ್ರವಾದಿ(ﷺ) ಯವರು ಕಅ್‌ಬಾಲಯದ ಪುನರ್ ನಿರ್ಮಾಣ ಕಾರ್ಯವನ್ನು ಕೈಬಿಟ್ಟರು."[23]

ಅಲ್‌ಇಝ್ಝ್ ಇಬ್ನ್ ಅಬ್ದಿಸ್ಸಲಾಮ್ ಹೇಳುತ್ತಾರೆ.

"ಹಿತವನ್ನುಂಟು ಮಾಡುವ ಕಾರ್ಯ ಮತ್ತು ಹಾನಿಯನ್ನುಂಟು ಮಾಡುವ ಕಾರ್ಯ ಪರಸ್ಪರ ಒಟ್ಟಾಗಿದ್ದರೆ ಹಿತವನ್ನುಂಟು ಮಾಡುವ ಕಾರ್ಯವನ್ನು ಸ್ವೀಕರಿಸಿ ಹಾನಿಯನ್ನುಂಟು ಮಾಡುವ ಕಾರ್ಯವನ್ನು ತಡೆಗಟ್ಟಲು ಸಾಧ್ಯವಾದರೆ ಹಾಗೆ ಮಾಡಬೇಕು. ಏಕೆಂದರೆ ಅಲ್ಲಾಹು(ﷻ) ಹೇಳುತ್ತಾನೆ:

﴿ فَٱتَّقُواْ ٱللَّهَ مَا ٱسۡتَطَعۡتُمۡ ﴾

"ನಿಮಗೆ ಸಾಧ್ಯವಾಗುವಷ್ಟರ ಮಟ್ಟಿಗೆ ನೀವು ಅಲ್ಲಾಹನನ್ನು

20 ಅತ್ತಮ್‌ಹೀದ್ ಫೀ ತಖ್ರೀಜಿಲ್ ಫುರೂಇ ಅಲಲ್ ಉಸೂಲ್ 1/291

21 ಅಲ್‌ಮುಸ್ವದ್ದ ಫೀ ಉಸೂಲಿಲ್ ಫಿಕ್‌ಹ್ 1/350

22 ಫತ್‌ಹುಲ್ ಬಾರಿ 1/225

23 ಶರ್ಹು ನ್ನವವಿ ಅಲಾ ಸಹೀಹಿ ಮುಸ್ಲಿಂ 9/89

ಭಯಪಟ್ಟು ಜೀವಿಸಿರಿ.” (ಕುರ್‌ಆನ್ 64:16)

ಆದರೆ ಹಾನಿಯನ್ನುಂಟು ಮಾಡುವ ಕಾರ್ಯವನ್ನು ತಡೆಗಟ್ಟು-ವುದು ಮತ್ತು ಹಿತವನ್ನುಂಟು ಮಾಡುವ ಕಾರ್ಯವನ್ನು ಸ್ವೀ-ಕರಿಸುವುದು ಸಾಧ್ಯವಾಗದಿದ್ದರೆ ಹಾನಿಯನ್ನುಂಟು ಮಾಡುವ ಕಾರ್ಯವು ಹಿತವನ್ನುಂಟು ಮಾಡುವ ಕಾರ್ಯಕ್ಕಿಂತಲೂ ದೊಡ್ಡ-ದಾಗಿದ್ದರೆ ಹಾನಿಯನ್ನುಂಟು ಮಾಡುವ ಕಾರ್ಯವನ್ನು ತಡೆಗಟ್ಟ-ಬೇಕು. ಇದರಿಂದ ಹಿತವನ್ನುಂಟು ಮಾಡುವ ಕಾರ್ಯವು ಕೈತಪ್ಪಿ ಹೋದರೂ ಪರವಾಗಿಲ್ಲ.

ಅಲ್ಲಾಹು(ﷻ) ಹೇಳುತ್ತಾನೆ:

﴿ يَسْـَٔلُونَكَ عَنِ ٱلْخَمْرِ وَٱلْمَيْسِرِ ۖ قُلْ فِيهِمَآ إِثْمٌ كَبِيرٌ وَمَنَـٰفِعُ لِلنَّاسِ وَإِثْمُهُمَآ أَكْبَرُ مِن نَّفْعِهِمَا ۗ ﴾

“ಅವರು ಮದ್ಯ ಮತ್ತು ಜೂಜಿನ ಬಗ್ಗೆ ಕೇಳುತ್ತಿದ್ದಾರೆ. ಹೇಳಿರಿ. ಅದರಲ್ಲಿ ಅತಿದೊಡ್ಡ ಪಾಪವಿದೆ. ಜನರಿಗೆ ಕೆಲವು ಪ್ರಯೋಜನಗಳೂ ಇವೆ. ಆದರೆ ಅದರಲ್ಲಿರುವ ಪಾಪವು ಅದರಲ್ಲಿರುವ ಪ್ರಯೋಜನ-ಕ್ಕಿಂತಲೂ ದೊಡ್ಡದು.” (ಕುರ್‌ಆನ್ 2:219)

ಮದ್ಯ ಮತ್ತು ಜೂಜನ್ನು ನಿಷಿದ್ಧಗೊಳಿಸಿರುವುದು ಅವುಗಳ ಹಾನಿಯು ಅವುಗಳ ಪ್ರಯೋಜನಕ್ಕಿಂತಲೂ ದೊಡ್ಡದಾಗಿರು-ವುದರಿಂದ. ಹಾನಿಯನ್ನುಂಟು ಮಾಡುವ ಕಾರ್ಯಕ್ಕಿಂತಲೂ ಹಿತವನ್ನುಂಟು ಮಾಡುವ ಕಾರ್ಯವು ದೊಡ್ಡದಾದರೆ ಆ ಹಾನಿಯ ಬಗ್ಗೆ ನಿಗಾ ವಹಿಸುತ್ತಾ ಹಿತವನ್ನುಂಟು ಮಾಡುವ ಕಾರ್ಯವನ್ನು ಸ್ವೀಕರಿಸಬೇಕು. ಇನ್ನು ಹಿತ ಮತ್ತು ಹಾನಿ ಸಮಾನವಾಗಿದ್ದರೆ ಅವುಗಳಲ್ಲಿ ಒಂದನ್ನು ಆರಿಸಿಕೊಳ್ಳಬೇಕು.”[24]

## ತತ್ವವನ್ನು ಜೀವನದಲ್ಲಿ ಅಳವಡಿಸುವುದು ಹೇಗೆ?

“ಹಿತವನ್ನು ತರುವುದಕ್ಕಿಂತಲೂ ಹಾನಿಯನ್ನು ತಡೆಗಟ್ಟಲು ಅಗ್ರಪ್ರಾಶಸ್ತ್ಯ ನೀಡಬೇಕು” ಎಂಬ ಈ ತತ್ವವನ್ನು ಜೀವನದಲ್ಲಿ ಅಳವಡಿಸಿಕೊಳ್ಳುವುದು ಹೇಗೆ? ಇದಕ್ಕೆ ಅಲ್ಲಾಹು(ﷻ) ಒಂದು ಉದಾಹರಣೆಯನ್ನು ನೀಡುತ್ತಾನೆ.

﴿ وَلَا تَسُبُّوا۟ ٱلَّذِينَ يَدْعُونَ مِن دُونِ ٱللَّهِ فَيَسُبُّوا۟ ٱللَّهَ عَدْوًۢا بِغَيْرِ عِلْمٍ ۗ ﴾

“ಅವರು ಅಲ್ಲಾಹನನ್ನು ಬಿಟ್ಟು ಆರಾಧಿಸುವವರ ಬಗ್ಗೆ ನೀವು ಕೆಟ್ಟದಾಗಿ ಮಾತನಾಡಬಾರದು. ಹಾಗೆ ಮಾಡಿದರೆ ಅವರು ಅರಿವಿಲ್ಲದೆ ಅಲ್ಲಾಹನ ಬಗ್ಗೆ ಕೆಟ್ಟದಾಗಿ ಮಾತನಾಡುವರು.” (ಕುರ್‌ಆನ್ 6:108)

ಮುಶ್ರಿಕರ ಆರಾಧ್ಯವಸ್ತುಗಳನ್ನು ತೆಗಳುವುದು ಮನುಷ್ಯನನ್ನು ಅಲ್ಲಾಹನ ಕಡೆಗೆ ಹತ್ತಿರಗೊಳಿಸುವ ಪುಣ್ಯಕರ್ಮವಾಗಿದೆ ಎನ್ನು-ವುದರಲ್ಲಿ ಸಂಶಯವಿಲ್ಲ. ಅದು ಹಿತವನ್ನುಂಟು ಮಾಡುವ ಕಾರ್ಯವಾಗಿದೆ. ಆದರೆ ಅದು ಮುಶ್ರಿಕರು ಅಲ್ಲಾಹನನ್ನು ತೆಗಳಲು ಕಾರಣವಾಗುವುದರಿಂದ ಅದನ್ನು ವಿರೋಧಿಸಲಾಗಿದೆ.

ಇಲ್ಲಿ ಹಾನಿಯನ್ನುಂಟು ಮಾಡುವ ಕಾರ್ಯವನ್ನು ತಡೆಗಟ್ಟುವುದ-ಕ್ಕೆ ಹಿತವನ್ನುಂಟು ಮಾಡುವ ಕಾರ್ಯವನ್ನು ಸ್ವೀಕರಿಸುವುದಕ್ಕಿಂ-ತಲೂ ಅಗ್ರಪ್ರಾಶಸ್ತ್ಯವನ್ನು ನೀಡಬೇಕಾಗಿದೆ. ಧರ್ಮ ಪ್ರಚಾರಕನು ಅಲ್ಲಾಹನ ಕಡೆಗೆ ಜನರನ್ನು ಕರೆಯುವಾಗ ಈ ತತ್ವವನ್ನು ಗಮನದಲ್ಲಿಟ್ಟುಕೊಳ್ಳಬೇಕು.

ಇನ್ನೊಂದು ಉದಾಹರಣೆ, ಪ್ರವಾದಿಯವರು(ﷺ) ಕಅ್‌ಬಾಲಯ-ವನ್ನು ಪುನರ್ ನಿರ್ಮಿಸಿ ಅದಕ್ಕೆ ಎರಡು ಬಾಗಿಲುಗಳನ್ನು ಸೇರಿಸಲು ಉದ್ದೇಶಿಸಿದ್ದರು. ಆದರೆ ಕುರೈಶರು ಹೊಸದಾಗಿ ಇಸ್ಲಾಮಿಗೆ ಬಂದವರಾಗಿದ್ದರಿಂದ ಅದು ಫಿತ್ನಕ್ಕೆ ಕಾರಣವಾಗಬಹುದೆಂದು ಅವರು ಭಯಪಟ್ಟರು.[25]

## ಶಾಖಾಪರವಾದ ಕೆಲವು ಉದಾಹರಣೆಗಳು

ಒಬ್ಬ ವ್ಯಕ್ತಿ ತನ್ನ ಒಡೆತನದಲ್ಲಿರುವ ಆಸ್ತಿಯಲ್ಲಿ ಮನಬಂದಂತೆ ವರ್ತಿ-ಸುವುದನ್ನು ನೆರೆಯವನು ವಿರೋಧಿಸಬಹುದು. ವಿಶೇಷವಾಗಿ ಆ ವರ್ತನೆಯಿಂದ ಅವನಿಗೆ ಹಾನಿಯಾಗುವುದಾದರೆ.

ಉದಾಹರಣೆಗೆ, ಆಡು, ಕುರಿ ಮುಂತಾದ ಜಾನುವಾರುಗಳನ್ನು

24 ಕವಾಇದುಲ್ ಅಹ್ಕಾಮ್ ಫೀ ಮಸಾಲಿಹಿಲ್ ಅನಾಮ್ 74 -75

25 ಶರ್ಹ್ ಮನ್‌ಝೂಮತಿಲ್ ಕವಾಇದಿಲ್ ಫಿಕ್‌ಹಿಯ್ಯ 1/27

*26 ನೇ ಪುಟಕ್ಕೆ*

# ಗೈಬ್–ವಿಶ್ವಾಸದ ಕೀಲಿಕೈ

ಎಲ್ಲಾ ಗೋರಿಯ ವ್ಯಾಪಾರಗಳು, ಪವಾಡ ಪುರುಷರು, ತಂಙಳ್‌ಗಳು, ಬೀವಿಗಳು ಈ ತಪ್ಪುಕಲ್ಪನೆಯ ಆಧಾರದ ಮೇಲೆ ನೆಲೆಗೊಂಡವರಾಗಿದ್ದಾರೆ. ಈ ವಿಷಯದಲ್ಲಿ ಒಬ್ಬ ಮುಸ್ಲಿಮನು ಸ್ಪಷ್ಟವಾದ ಜ್ಞಾನ ಪಡೆಯುವುದರೊಂದಿಗೆ ಅವರು ಗೋರಿ ವ್ಯಾಪಾರನ್ನು ಬಿಟ್ಟುಬಿಡುತ್ತಾರೆ. ಪವಾಡ ಪುರುಷರು, ತಂಙಳ್‌ಗಳು ಮತ್ತು ಬೀವಿಗಳನ್ನು ತೊರೆಯುತ್ತಾರೆ. ಇಚ್ಛಾಸಫಲತೆಗಾಗಿ ಅಲ್ಲಾಹನನ್ನು ಮಾತ್ರ ಆಶ್ರಯಿಸುವವರಾಗಿ ಮಾರ್ಪಡುತ್ತಾರೆ. ಈ ರೀತಿಯಲ್ಲಿ ಅವರು ನೈಜ ಏಕದೇವವಿಶ್ವಾಸಿಗಳಾಗಿ ಪರಿವರ್ತನೆಯಾಗುತ್ತಾರೆ.

ಮರೆಯಾದುದು ಎಂಬ ಅರ್ಥವಿರುವ 'ಗೈಬ್' (الغيب) ಎಂಬ ಅರಬಿ ಪದವು ಇಸ್ಲಾಮೀ ವಿಶ್ವಾಸದ ಮೂಲಭೂತ ಬುನಾದಿಯಾಗಿದೆ. ಅಲ್ಲಾಹನ ಕಾಲಾತೀತವಾದ ಜ್ಞಾನದ ಭಾಗ. ಇಸ್ಲಾಮೀ ಮೂಲಭೂತ ವಿಶ್ವಾಸಗಳೆಲ್ಲವೂ ಮರೆಯಾದ ಕಾರ್ಯ-ಗಳಾಗಿವೆ ಎಂಬ ಸತ್ಯವನ್ನು ನಾವು ನೆನಪಿಸಬೇಕು.

ಅಲ್ಲಾಹು ನಮಗೆ ಅಗೋಚರನಾಗಿದ್ದಾನೆ. ಸ್ವರ್ಗವು ನಮ್ಮ ಜ್ಞಾನಕ್ಕೆ ಅತೀತವಾಗಿದೆ. ನರಕವು ನಮ್ಮಿಂದ ಮರೆಯಾಗಿದೆ. ಮರಣಾನಂ-ತರದ ಬರ್ಝಖ್ ಜೀವನ ಹಾಗೂ ಕಬರಿನ ಶಿಕ್ಷಾ–ರಕ್ಷೆಗಳು ನಮ್ಮ ಇಂದ್ರಿಯಗಳ ಪರಿಧಿಯಿಂದ ಆಚೆಗಿದೆ.

ಮಲಕ್‌ಗಳು ಅಗೋಚರರಾಗಿದ್ದಾರೆ. 'ಅಂತ್ಯದಿನ'ವು ಪ್ರಮಾಣಗಳು ಕಲಿಸಿಕೊಟ್ಟಿರುವುದಕ್ಕಿಂತ ಆಚೆಗಿನ ವಿಷಯ ನಮಗೆ ಅಜ್ಞಾತವಾ-ಗಿದೆ... ಹೀಗೆ ವಿಶ್ವಾಸದ ಬೆನ್ನು–ಮೂಳೆಗಳಲ್ಲಿ ನಾವು ವಿಶ್ವಾಸವಿರಿ-ಸುವುದು ಅಗೋಚರ ಕಾರ್ಯ ಎಂಬ ನೆಲೆಯಲ್ಲಾಗಿದೆ.

ಅಲ್ಲಾಹನು ಅವನ ದಾಸರಿಗೆ ಅವನ ಜ್ಞಾನದಿಂದ ವಹ್ಯ್ ಮೂಲಕ ತಿಳಿಸಿಕೊಟ್ಟಿರುವುದಕ್ಕಿಂತ ಮಿಗಿಲಾಗಿ ಅವನ ಜ್ಞಾನ–ಭಂಡಾರದ ಆಳಕ್ಕಿಳಿಯಲು ಯಾರಿಗೆ ಸಾಧ್ಯವಿದೆ? ಅದು ಸಾಧ್ಯವಿಲ್ಲ. ಪ್ರವಾ-ದಿಗಳಿಗೆ ಕೂಡ ಅಲ್ಲಾಹನು ತಿಳಿಸಿಕೊಟ್ಟದ್ದನ್ನು ಹೊರತುಪಡಿಸಿ ಬೇರೆ ಅಗೋಚರ ಕಾರ್ಯವನ್ನು ಬಲ್ಲವರಲ್ಲ. ಕುರ್‌ಆನ್ ಇದನ್ನು ಪುನರಾವರ್ತಿಸಿ ಹೇಳಿದೆ.

﴿لَهُۥ غَيْبُ ٱلسَّمَٰوَٰتِ وَٱلْأَرْضِ ۖ أَبْصِرْ
بِهِۦ وَأَسْمِعْ ۚ مَا لَهُم مِّن دُونِهِۦ مِن وَلِىٍّ
وَلَا يُشْرِكُ فِى حُكْمِهِۦٓ أَحَدًا ﴿٢٦﴾﴾

"...ಆಕಾಶಗಳ ಮತ್ತು ಭೂಮಿಯ ಎಲ್ಲ ರಹಸ್ಯ ಸಂಗತಿಗಳು ಅವನಿಗೆ ಮಾತ್ರ ತಿಳಿದಿದೆ. ಅವನ ವೀಕ್ಷಣ ಮತ್ತು ಶ್ರವಣ ಅದೆಷ್ಟು ಸೂಕ್ಷ್ಮ! ಅವನ ಹೊರತು ರಕ್ಷಕರಾರೂ ಇಲ್ಲ. ಅವನು ತನ್ನ ಆಜ್ಞಾಧಿಕಾರದಲ್ಲಿ ಯಾರನ್ನೂ ಭಾಗೀದಾರರನ್ನಾಗಿ ಮಾಡುವುದಿಲ್ಲ." (18:26)

﴿قُل لَّا يَعْلَمُ مَن فِى ٱلسَّمَٰوَٰتِ وَٱلْأَرْضِ ٱلْغَيْبَ
إِلَّا ٱللَّهُ ۚ وَمَا يَشْعُرُونَ أَيَّانَ يُبْعَثُونَ ﴿٦٥﴾﴾

"(ಪ್ರವಾದಿಯವರೇ!) ಹೇಳಿರಿ. ಅಲ್ಲಾಹನ ಹೊರತು ಆಕಾಶ ಮತ್ತು ಭೂಮಿಗಳಲ್ಲಿರುವವರು ಅದೃಶ್ಯಕಾರ್ಯಗಳನ್ನು ಅರಿಯುವವರಲ್ಲ. ಅವರು ತಾವು ಯಾವಾಗ ಎಬ್ಬಿಸಲ್ಪಡುವೆವೆಂದೂ ತಿಳಿದವರಲ್ಲ."

ಅಲ್ಲಾಹನು ಪ್ರವಾದಿ(ﷺ) ಯವರೊಂದಿಗೆ ಹೀಗೆ ಹೇಳಲು ಆಜ್ಞಾಪಿಸುತ್ತಾನೆ.

﴿ قُل لَّآ أَقُولُ لَكُمۡ عِندِي خَزَآئِنُ ٱللَّهِ وَلَآ أَعۡلَمُ ٱلۡغَيۡبَ وَلَآ أَقُولُ لَكُمۡ إِنِّي مَلَكٌۖ إِنۡ أَتَّبِعُ إِلَّا مَا يُوحَىٰٓ إِلَيَّۚ قُلۡ هَلۡ يَسۡتَوِي ٱلۡأَعۡمَىٰ وَٱلۡبَصِيرُۚ أَفَلَا تَتَفَكَّرُونَ ٥٠ ﴾

"(ಪ್ರವಾದಿಯವರೇ!) ಹೇಳಿರಿ. ನನ್ನಲ್ಲಿ ಅಲ್ಲಾಹನ ಖಜಾನೆಗಳಿವೆಯೆಂದು ನಾನು ನಿಮ್ಮೊಡನೆ ಹೇಳುವುದಿಲ್ಲ. ನಾನು ಪರೋಕ್ಷಜ್ಞಾನಿಯೂ ಅಲ್ಲ. ನಾನು ಮಲಕ್ ಆಗಿದ್ದೇನೆಂದೂ ಹೇಳುವುದಿಲ್ಲ. ನಾನು ನನ್ನ ಮೇಲೆ ಅವತೀರ್ಣಗೊಳ್ಳುತ್ತಿರುವ ವಹ್ಯನ್ನು ಅನುಸರಿಸುವುದನ್ನು ಮಾತ್ರ ಮಾಡುತ್ತಿದ್ದೇನೆ. ಕುರುಡನೂ, ದೃಷ್ಟಿಯುಳ್ಳವನೂ ಸರಿಸಮಾನರಾಗಿರಲು ಸಾಧ್ಯವೇ? ನೀವು ವಿವೇಚಿಸುವುದಿಲ್ಲವೇ? ಎಂದು ಇವರೊಡನೆ ಕೇಳಿರಿ." (6:50)

ವಹ್ಯ್‌ನಿಂದಲ್ಲದೆ ಪ್ರವಾದಿಗಳು ಕೂಡ ಅಗೋಚರ ಕಾರ್ಯಗಳನ್ನು ತಿಳಿಯುವುದಿಲ್ಲ ಎನ್ನುವುದಕ್ಕೆ ಕುರ್‌ಆನಿನಲ್ಲಿ ಹಲವಾರು ಉದಾಹರಣೆಗಳನ್ನು ನೋಡಬಹುದಾಗಿದೆ.

ಪ್ರವಾದಿ ಇಬ್ರಾಹೀಮ(ﷺ) ರ ಬಳಿಗೆ ಮಲಕ್‌ಗಳು ಬಂದಾಗ ಅವರು ತಿಳಿಯದಿರುವುದು, ಪ್ರವಾದಿ ಮೂಸಾ(ﷺ) ರ ಕೈಯಲ್ಲಿದ್ದ ಬೆತ್ತ ಹಾವಾಗಿ ಮಾರ್ಪಡುವ ಸ್ವಲ್ಪ ಮೊದಲು ಏನು ಸಂಭವಿಸುತ್ತದೆಯೆಂದು ಅವರು ಅರಿಯದಿರುವುದು ಮುಂತಾದ ಘಟನೆಗಳು ಕೆಲವು ಉದಾಹರಣೆಗಳು ಮಾತ್ರವಾಗಿದೆ.

ಪ್ರವಾದಿ ಮುಹಮ್ಮದ್(ﷺ) ರವರೇ ಏನು ಹೇಳುತ್ತಾರೆ? "ನನಗೆ ಅದೃಶ್ಯ ಜ್ಞಾನವಿರುತ್ತಿದ್ದರೆ ನಾನು ಒಳಿತನ್ನು ವರ್ಧಿಸುತ್ತಿದ್ದೆ. ಯಾವುದೇ ಕೇಡು ನನ್ನನ್ನು ಬಾಧಿಸುತ್ತಿರಲಿಲ್ಲ" ಎಂದಾಗಿದೆ.

ಪ್ರವಾದಿ(ﷺ) ಯವರ ಜೀವನದಲ್ಲಿ ಪ್ರತಿಕೂಲ ಸನ್ನಿವೇಶಗಳು ಎದುರಾಗಲಿಲ್ಲವೇ? ಎಲ್ಲವೂ ಮೊದಲೇ ಗೊತ್ತಿರುತ್ತಿದ್ದರೆ ಬೇರೆ ದಾರಿಯಲ್ಲಿ ನಡೆಯುತ್ತಿರಲಿಲ್ಲವೇ?

ಮಕ್ಕಾ ನಿವಾಸಿಗಳ ಉಪಟಳವನ್ನು ಸಹಿಸಲಾಗದೆ ಪ್ರವಾದಿ(ﷺ) ಯವರು ತಾಇಫ್‌ಗೆ ಹೋದಾಗ ಅವರ ನಿರೀಕ್ಷೆ ಏನಾಗಿತ್ತು? ಅಲ್ಲಿರುವ ಸಂಬಂಧಿಕರು ತನ್ನನ್ನು ರಕ್ಷಿಸುತ್ತಾರೆಂದು ಅವರು ಭಾವಿಸಿದ್ದರು. ಆದರೆ ಸಂಭವಿಸಿದ್ದೇನು? ಅವರು ನಿಷ್ಕಾರುಣ್ಯದಿಂದ ಮರ್ದಿಸಿದರು.

ವರಕತುಬಿನ್ ನೌಫಲ್ ಮಕ್ಕಾದ ನಿವಾಸಿಗಳು ನಿಮ್ಮನ್ನು ನಾಡಿನಿಂದ ಬಹಿಷ್ಕರಿಸುತ್ತಾರೆ ಎಂದು ಹೇಳಿದಾಗ ಆಶ್ಚರ್ಯಪಟ್ಟ ಪ್ರವಾದಿ(ﷺ) ಯವರು ಮಕ್ಕಾದವರು ಬಹಿಷ್ಕರಿಸುವ ಘಟ್ಟಕ್ಕೆ ಪಲುಪಿದಾಗ ಅತ್ಯಂತ ನೋವನ್ನು ಅನುಭವಿಸಿದ್ದು ಏಕೆ?

ಉಹುದ್ ಯುದ್ಧದ ಸಂದರ್ಭದಲ್ಲಿ ತುಸು ಮುಂದಿದ್ದ ಮೋಸದ ಹೊಂಡವೂ ಪ್ರವಾದಿ(ﷺ) ಯವರಿಗೆ ಏಕೆ ತಿಳಿಯಲಿಲ್ಲ? ಉಮ್ರಕ್ಕೆ ತೆರಳಿದಾಗ ನಾವು ಹುದೈಬಿಯಾದಲ್ಲಿ ತಡೆಹಿಡಿಯಲ್ಪಡುತ್ತೇವೆ ಎಂದು ಪ್ರವಾದಿ(ﷺ) ಯವರಿಗೆ ಏಕೆ ಗೊತ್ತಾಗಲಿಲ್ಲ?

ಹೀಗೆ ಪ್ರವಾದಿ(ﷺ) ಯವರು ಅದೆಷ್ಟೋ ಸಂದರ್ಭಗಳಲ್ಲಿ ಕಷ್ಟಗಳು ಮತ್ತು ದುಃಖಗಳನ್ನು ಅನುಭವಿಸಬೇಕಾಯಿತಲ್ಲವೇ? ಅಂತಹ ಕಾರ್ಯಗಳನ್ನು ಪ್ರವಾದಿ(ﷺ) ಯವರಿಗೆ ಮುಂಚಿತವಾಗಿಯೇ ತಿಳಿಯಲು ಏಕೆ ಸಾಧ್ಯವಾಗಲಿಲ್ಲ? ವಹ್ಯ್ ಮೂಲಕ ಅಲ್ಲಾಹು ತಿಳಿಸಿಕೊಟ್ಟದ್ದನ್ನಲ್ಲದೆ ಬೇರೇನೂ ಅವರು ಅರಿಯುತ್ತಿರಲಿಲ್ಲ ಎನ್ನುವುದು ವ್ಯಕ್ತವಿದೆ.

ಆದರೆ ವಹ್ಯ್ ಮೂಲಕ ಅಲ್ಲಾಹನು ಅವನ ಜ್ಞಾನದಿಂದ ಪ್ರವಾದಿಗಳಿಗೆ ತಿಳಿಸಿದ ಎಲ್ಲಾ ಸಂದರ್ಭಗಳಲ್ಲಿ ಪ್ರವಾದಿಗಳು ಅದೃಶ್ಯಕಾರ್ಯಗಳನ್ನು ಅರಿತು ಅದನ್ನು ಹೇಳುತ್ತಿದ್ದರು.

ಇಸ್ಲಾಮೀ ವಿಶ್ವಾಸದಲ್ಲಿ ಕಲಬೆರಕೆ ಮಾಡಲು ಶ್ರಮಿಸುವವರು ಅಗೋಚರ ಕಾರ್ಯಗಳನ್ನು ಮಹಾತ್ಮರು ಅರಿಯುತ್ತಾರೆ ಎಂಬ ಕಲ್ಪನೆಯನ್ನು ಜನಸಾಮಾನ್ಯರೆಡೆಯಲ್ಲಿ ಪ್ರಚುರಪಡಿಸುವ ಮೂಲಕ ಅದರಿಂದ ತಮ್ಮ ಸ್ವಾರ್ಥ ಸಾಧಿಸುತ್ತಿರುವುದು ಹಗಲಿನಷ್ಟೇ ಸತ್ಯವಾಗಿದೆ.

ಎಲ್ಲಾ ಗೋರಿಯ ವ್ಯಾಪಾರಗಳು, ಪವಾಡ ಪುರುಷರು, ತಂಙಳ್‌ಗಳು, ಬೀವಿಗಳು ಈ ತಪ್ಪುಕಲ್ಪನೆಯ ಆಧಾರದ ಮೇಲೆ ನೆಲೆಗೊಂಡವರಾಗಿದ್ದಾರೆ. ಈ ವಿಷಯದಲ್ಲಿ ಒಬ್ಬ ಮುಸ್ಲಿಮನು ಸ್ಪಷ್ಟವಾದ ಜ್ಞಾನ ಪಡೆಯುವುದರೊಂದಿಗೆ ಅವರು ಗೋರಿ ವ್ಯಾಪಾರನ್ನು ಬಿಟ್ಟುಬಿಡುತ್ತಾರೆ.

ಪವಾಡ ಪುರುಷರು, ತಂಙಳ್‌ಗಳು ಮತ್ತು ಬೀವಿಗಳನ್ನು

*48 ನೇ ಪುಟಕ್ಕೆ*

# ಶತ್ರುಗಳ ವಿರುದ್ಧ ಜಾಗೃತರಾಗಿರಿ!

ಓ ಅಲ್ಲಾಹನ ದಾಸರೇ! ನಿಮ್ಮ ಶತ್ರುಗಳ ವಿರುದ್ಧ, ಪ್ರವಾದಿಗಳ ದಅ್‌ವತ್ತನ್ನು ವಿರೋಧಿಸುವವರ ವಿರುದ್ಧ, ಸಲಫುಸ್ಸಾಲಿಹ್‌ಗಳ ಮಾರ್ಗವನ್ನು ವಿರೋಧಿಸುವವರ ವಿರುದ್ಧ ಜಾಗೃತರಾಗಿರಿ. ನಿಮಗೆ ಅರಿವಿಲ್ಲದಂತೆ ಅವರು ನಿಮ್ಮನ್ನು ನರಕವಾಸಿಗಳನ್ನಾಗಿ ಮಾಡಲು ಬಯಸುತ್ತಾರೆ.

ಶೈಖ್ ಸಾಲಿಹ್ ಬಿನ್ ಫೌಝಾನ್ ಅಲ್‌ಫೌಝಾನ್

ಬನೂ ಇಸ್ರಾಈಲರ ಆಡಳಿತವು ಪ್ರವಾದಿಗಳ ಕೈಯಲ್ಲಿತ್ತು. ಅವರಲ್ಲಿ ಒಬ್ಬ ಪ್ರವಾದಿ ಮರಣಹೊಂದುವಾಗ ಇನ್ನೊಬ್ಬ ಪ್ರವಾದಿ ಆಗಮಿಸುತ್ತಿದ್ದರು.

ಆದರೆ ಪ್ರವಾದಿ ಮುಹಮ್ಮದ್(ﷺ) ರ ಮೂಲಕ ಪ್ರವಾದಿತ್ವವು ಕೊನೆಯಾದಾಗ ಅಲ್ಲಾಹು(ﷻ) ವಿದ್ವಾಂಸರನ್ನು ಪ್ರವಾದಿಗಳ ಉತ್ತರಾಧಿಕಾರಿಗಳನ್ನಾಗಿ ಮಾಡಿದನು. ಅವರು ಈ ಸಮುದಾಯ-ದಲ್ಲಿ ಬಿದ್‌ಅತ್ ಮತ್ತು ನೂತನಾಚಾರಗಳು ತುಂಬಿ ತುಳುಕುವಾಗ ಅದನ್ನು ಶುದ್ಧೀಕರಿಸಿ ಧರ್ಮವನ್ನು ನವೀಕರಿಸುತ್ತಿದ್ದರು.

ಪ್ರವಾದಿ(ﷺ) ಯವರು ಹೇಳುತ್ತಾರೆ.

«إِنَّ اللَّـهُ يَبْعَثُ لِهَـذِهِ الْأُمَّةِ عَلَـى رَأْسِ كُلِّ مِائَةِ سَـنَةٍ مَنْ يُجَدِّدُ لَهَـا دِينَهَا» .

“ಅಲ್ಲಾಹು ಈ ಸಮುದಾಯಕ್ಕೆ ಅವರ ಧರ್ಮವನ್ನು ನವೀಕರಿಸಲು ಪ್ರತಿ ನೂರು ವರ್ಷಗಳ ಆದಿಯಲ್ಲಿ ಒಬ್ಬರನ್ನು ಕಳುಹಿಸುತ್ತಾನೆ.”

ಹನ್ನೆರಡನೇ ಶತಮಾನದಲ್ಲಿ ಬಂದ ಶೈಖುಲ್ ಇಸ್ಲಾಮ್ ಮುಹಮ್ಮದ್ ಇಬ್ನ್ ಅಬ್ದುಲ್ ವಹ್ಹಾಬ್(ﷺ) ಈ ಮುಜದ್ದಿದ್‌ಗಳ ಪೈಕಿ ಒಬ್ಬರು. ನಾನು ಇದನ್ನು ಭಾವನಾತ್ಮಕವಾಗಿ ಅಥವಾ ದಾಕ್ಷಿಣ್ಯ-ದಿಂದ ಹೇಳುತ್ತಿಲ್ಲ. ಬದಲಾಗಿ ಶೈಖ್‌ರವರ ಜೀವನ ಚರಿತ್ರೆಯಲ್ಲಿರುವ ಉದಾಹರಣಾಯೋಗ್ಯ ಸಂಭವಗಳನ್ನು ಮತ್ತು ಅದರ ಪ್ರಶಂಸಾರ್ಹ ಪರಿಣಾಮಗಳನ್ನು ಗಮನಿಸಿ ನಾನಿದನ್ನು ಹೇಳುತ್ತಿದ್ದೇನೆ.

ಅಕೀದದಲ್ಲಿ ಮತ್ತು ಈಗಿನ ಸುಧಾರಣಾ ಪ್ರವೃತ್ತಿಗಳಲ್ಲಿ ಅವರು ಮಾಡಿದ ವೈಶಿಷ್ಟ್ಯಪೂರ್ಣ ಸುಧಾರಣೆಗಳನ್ನು ಮುಸಲ್ಮಾನರು ಇಂದೂ ಸಹ ಕಾಣುತ್ತಿದ್ದಾರೆ. ಅವರ ಕೃತಿಗಳು ಕೂಡ ಇದಕ್ಕೆ ಸಾಕ್ಷಿಯಾಗಿವೆ. ನ್ಯಾಯವಂತರು ಮತ್ತು ಸಂಶೋಧಕರು ಕೂಡ ಇದಕ್ಕೆ ಸಾಕ್ಷಿಯಾಗಿದ್ದಾರೆ. ಎಲ್ಲಿಯವರೆಗೆಂದರೆ ಅವರ ಶತ್ರುಗಳು ಸಹ ಈ ವಿಷಯದಲ್ಲಿ ಅವರನ್ನು ಮುಕ್ತವಾಗಿ ಶ್ಲಾಘಿಸಿದ್ದಾರೆ.

ಪ್ರವಾದಿಗಳಿಗೆ ಮತ್ತು ಅವರನ್ನು ಅನುಸರಿಸುವ ಸುಧಾರಣಾ-ವಾದಿಗಳಿಗೆ ಶತ್ರುಗಳಿರುವುದು ಸ್ವಾಭಾವಿಕ. ಇದು ಅಲ್ಲಾಹನ ಕ್ರಮವಾಗಿದೆ. ಶೈಖುಲ್ ಇಸ್ಲಾಮ್ ಮುಹಮ್ಮದ್ ಬಿನ್ ಅಬ್ದುಲ್ ವಹ್ಹಾಬ್(ﷺ) ರವರಿಗೂ ಶತ್ರುಗಳಿದ್ದರು. ಅವರು ತಮ್ಮ ಧರ್ಮ ಪ್ರಚಾರ ಮಾರ್ಗದಲ್ಲಿ ಶತ್ರುಗಳಿಂದ ಮೂದಲಿಕೆ ಮತ್ತು ಅಭ್ಯಂತ-ರಗಳ ದೊಡ್ಡ ಸರಮಾಲೆಯನ್ನೇ ಎದುರಿಸಿದ್ದರು.

ಅಲ್ಲಾಹನ ಕಡೆಗೆ ಆಮಂತ್ರಿಸುವ, ಸರಿಯಾದ ವಿಶ್ವಾಸವನ್ನು ಪ್ರಚಾರ ಮಾಡುವ, ಶಿರ್ಕ್–ಬಿದ್‌ಅತ್ ಮತ್ತು ಪಥಭ್ರಷ್ಟತೆಗಳನ್ನು

ವಿರೋಧಿಸುವವರನ್ನು ವಹ್ಹಾಬಿ ಎಂಬ ಅಡ್ಡ ಹೆಸರಿನಿಂದ ಕರೆದು ಮೂದಲಿಸುವುದು ಶತ್ರುಗಳಲ್ಲಿ ಸಾಮಾನ್ಯವಾಗಿ ಕಂಡು ಬರುವ ಅಭ್ಯಾಸ. ವಾಸ್ತವವಾಗಿ, ಶೈಖ್‌ರವರಿಗೆ ಸಂಬಂಧಿಸಿದಂತೆ ಇದೊಂದು ಹೆಮ್ಮೆಯೇ ಹೊರತು ನಿಂದನೆಯಲ್ಲ. ಅಲ್ಲಾಹನಿಗೆ ಸರ್ವಸ್ತುತಿ.

ಆದರೆ ಶತ್ರುಗಳ ಉದ್ದೇಶ ಶೈಖ್‌ರನ್ನು ಪ್ರಶಂಸಿಸುವುದಲ್ಲ, ಬದಲಾಗಿ ನಿಂದಿಸುವುದು. ಆದರೆ ಅವರ ಉದ್ದೇಶವನ್ನು ಅಲ್ಲಾಹು ತಿರಸ್ಕರಿಸಿದ್ದಾನೆ.

ಶೈಖ್ ಇಮ್ರಾನ್ ಮುಲ್ಲಾ(ﷺ) ಹೇಳುತ್ತಾರೆ. "ಶೈಖ್ ಮುಹಮ್ಮದ್‌ರ ಹಿಂಬಾಲಕರು ವಹ್ಹಾಬಿಗಳು (ಉದಾರವಾಗಿ ದಾನ ಮಾಡುವವರು) ಎಂದಾಗಿದ್ದರೆ ನಾನು ವಹ್ಹಾಬಿಯಾಗಿದ್ದೇನೆ ಎನ್ನುವುದಕ್ಕೆ ಜಿನ್ನ್ ಮತ್ತು ಮನುಷ್ಯ ವರ್ಗದಲ್ಲಿ ಸೇರಿದವರೆಲ್ಲರೂ ಸಾಕ್ಷಿಯಾಗಲಿ."

ಆದರೆ ವಾಸ್ತವವಾಗಿ, ಈ ಅಡ್ಡ ಹೆಸರಿನಿಂದ ಶತ್ರುಗಳು ಉದ್ದೇಶಿಸುವುದು ಜನರನ್ನು ಸತ್ಯದಿಂದ ತಡೆಗಟ್ಟುವುದನ್ನಾಗಿದೆ. "ಮುಹಮ್ಮದ್ ಬಿನ್ ಅಬ್ದುಲ್ ವಹ್ಹಾಬ್(ﷺ) ರ ಧರ್ಮಪ್ರಚಾರ ಅವರದ್ದೇ ಆದ ಒಂದು ಪಂಗಡವನ್ನು ಸ್ಥಾಪಿಸುವುದಕ್ಕಾಗಿದೆ. ಆದ್ದರಿಂದಲೇ ಅವರ ಈ ಧರ್ಮಪ್ರಚಾರ ಕಾರ್ಯದಲ್ಲಿ ಅಂದಿನ ಯಾವುದೇ ವಿದ್ವಾಂಸರೂ ಪಾಲ್ಗೊಂಡಿಲ್ಲ" ಎಂದು ಅವರು ಅಪಪ್ರಚಾರ ಮಾಡುತ್ತಾರೆ.

ಆದರೆ ವಾಸ್ತವವಾಗಿ, ಶೈಖ್‌ರವರು(ﷺ) ಪ್ರವಾದಿಗಳು ತಂದ ಸಂದೇಶದ ಮಾರ್ಗದಲ್ಲಿ, ಸಹಾಬಾಗಳು ಮತ್ತು ತಾಬಿಊನ್‌ಗಳು ಚಲಿಸಿದ ಮಾರ್ಗದಲ್ಲಿ ಮತ್ತು ಪ್ರವಾದಿ(ﷺ) ರವರು ಪ್ರಶಂಸಿಸಿದ ಮತ್ತು ಅನುಸರಿಸಬೇಕೆಂದು ಪ್ರೋತ್ಸಾಹಿಸಿದ ಮೊದಲ ಮೂರು ಉತ್ತಮ ತಲೆಮಾರುಗಳು ಚಲಿಸಿದ ಮಾರ್ಗದಲ್ಲಿ ಚಲಿಸಿದವರಾಗಿದ್ದರು. ಅಲ್‌ಜಹ್ಮ್‌ಗೆ ಸೇರಿಸಿ ಹೇಳಲಾಗುವ ಜಹ್ಮಿಯ್ಯ ಪಂಗಡದಂತೆ, ಮುಅ್‌ತಝಿಲ, ಅಶ್‌ಅರಿಯ್ಯ, ಸೂಫಿಯ್ಯ ಮುಂತಾದ ಸಲಫುಸ್ಸಾಲಿಹ್‌ಗಳ ಮಾರ್ಗಕ್ಕೆ ವಿರುದ್ಧವಾಗಿ ಚಲಿಸಿದ ಇತರ ಪಂಗಡಗಳಂತೆ ಶೈಖ್ ಮುಹಮ್ಮದ್ ಇಬ್ನ್ ಅಬ್ದುಲ್ ವಹ್ಹಾಬ್(ﷺ) ತಮ್ಮ ಹೆಸರಿಗೆ ಸೇರಿಸಿ ಹೇಳುವ ಪ್ರತ್ಯೇಕ ಪಂಗಡವನ್ನು ಸ್ಥಾಪಿಸಲಿಲ್ಲ.

ಶೈಖ್ ಮುಹಮ್ಮದ್ ಇಬ್ನ್ ಅಬ್ದುಲ್ ವಹ್ಹಾಬ್(ﷺ) ರವರು ಸಲಫುಸ್ಸಾಲಿಹ್‌ಗಳ ಮಾರ್ಗದಲ್ಲಿ ಚಲಿಸಿದರು. ಶಿರ್ಕ್, ಬಿದ್‌ಅತ್ ಮತ್ತು ಪಥಭ್ರಷ್ಟತೆಗಳ ವಿರುದ್ಧ ರಾಜಿರಹಿತ ಯುದ್ಧ ಸಾರುವ ಮೂಲಕ ಅವರು ಸಲಫುಸ್ಸಾಲಿಹ್‌ಗಳ ಮಾರ್ಗವನ್ನು ನವೀಕರಿಸಿದರು. ಆದರೆ ಈ ಶತ್ರುಗಳು ಜನರನ್ನು ಸತ್ಯದ ಮಾರ್ಗದಿಂದ ತಡೆಗಟ್ಟಲು ಪ್ರಯತ್ನಿಸುತ್ತಿದ್ದಾರೆ.

ಶೈಖ್ ಮುಹಮ್ಮದ್ ಇಬ್ನ್ ಅಬ್ದುಲ್ ವಹ್ಹಾಬ್‌ರವರ ಕಾಲದಲ್ಲೂ ಅವರ ನಂತರದ ಕಾಲದಲ್ಲೂ ಜನರು ಮರಣಹೊಂದಿದ ಮಹಾತ್ಮರೊಂದಿಗೆ ಮತ್ತು ಗೋರಿಗಳಲ್ಲಿರುವ ಸಜ್ಜನರೊಂದಿಗೆ ಪ್ರಾರ್ಥಿಸುತ್ತಲೂ ಸಹಾಯ ಬೇಡುತ್ತಲೂ ಇದ್ದರು. ಆದರೆ ಶೈಖ್ ಮುಹಮ್ಮದ್ ಬಿನ್ ಅಬ್ದುಲ್ ವಹ್ಹಾಬ್ ಬಹುಪಾಲು ಜನರು ಅನುಸರಿಸುತ್ತಿದ್ದ ಪರಂಪರಾಗತವಾದ ಈ ಮಾರ್ಗವನ್ನು ವಿರೋಧಿಸಿದರು ಎಂದು ಶತ್ರುಗಳು ಹೇಳುತ್ತಾರೆ.

ಆದರೆ ವಾಸ್ತವವಾಗಿ ಇವರು ಹೇಳುವ ಆ ಬಹುಪಾಲು ಜನರು ಅಸತ್ಯದಲ್ಲಿದ್ದ ಜನರಾಗಿದ್ದರು.

﴿ بَلْ قَالُوٓا۟ إِنَّا وَجَدْنَآ ءَابَآءَنَا عَلَىٰٓ أُمَّةٍ وَإِنَّا عَلَىٰٓ ءَاثَٰرِهِم مُّهْتَدُونَ ﴿٢٢﴾ ﴾

"ನಾವು ನಮ್ಮ ಪೂರ್ವಜರನ್ನು ಒಂದು ಮಾರ್ಗದಲ್ಲಿರುವುದಾಗಿ ಕಂಡಿದ್ದೇವೆ ಮತ್ತು ನಾವು ಅವರ ಕುರುಹುಗಳಲ್ಲೇ ಮುನ್ನಡೆಯುತ್ತೇವೆ." (ಕುರ್‌ಆನ್ 43:22)

ಅವರ ನಿಜವಾದ ಉದ್ದೇಶ ಕುರ್‌ಆನ್ ಮತ್ತು ಸುನ್ನತ್ತನ್ನು ಬಿಗಿಯಾಗಿ ಹಿಡಿದುಕೊಂಡ ಸಲಫು ಸ್ವಾಲಿಹ್‌ಗಳೊಡನೆ ಮುಸಲ್ಮಾನರಿಗಿರುವ ಸಂಪರ್ಕವನ್ನು ಕಡಿಯುವುದಾಗಿದೆ. ಅವರ ವಾದ ಪ್ರಕಾರ ಸತ್ಯವೆಂದರೆ ಬಹುಪಾಲು ಜನರು ಸ್ವೀಕರಿಸಿದ ಮಾರ್ಗ. ಅದು ಅಸತ್ಯದ ಮಾರ್ಗವಾಗಿದ್ದರೂ ಸಹ. ಮಾತ್ರವಲ್ಲ, ಅವರಲ್ಲಿ ಕೆಲವರು ಸಲಫುಸ್ಸಾಲಿಹ್‌ಗಳ ಮಾರ್ಗ ಅವರ ನಂತರದವರಿಗೆ ಸೂಕ್ತವಲ್ಲ ಎಂದು ಹೇಳುತ್ತಾರೆ. ಪ್ರತಿಯೊಂದು ಸಮಾಜಕ್ಕೂ ಅದರದ್ದೇ ಆದ ಅವಕಾಶಗಳಿವೆ ಮತ್ತು ಅವರ ತಲೆಮಾರಿಗೆ ಹೊಂದಿಕೊಳ್ಳುವಂತಹ ವಿಶ್ವಾಸ ಮತ್ತು ಮಾರ್ಗವನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯವಿದೆ ಎಂದು ಅವರು ಹೇಳುತ್ತಾರೆ. ಬಹುಶಃ ಅವರ ಪ್ರಕಾರ ಕುರ್‌ಆನ್ ಮತ್ತು ಸುನ್ನತ್ ಪ್ರತಿಯೊಂದು ಕಾಲ ಮತ್ತು ಸ್ಥಳಕ್ಕೆ ಸೂಕ್ತವಲ್ಲ ಎಂಬಂತಿದೆ.

ಇಮಾಮ್ ಮಾಲಿಕ್(ﷺ) ಹೇಳುತ್ತಾರೆ.

لَا يُصْلِحُ آخِرَ هَذِهِ الْأُمَّةِ إِلَا مَا أَصْلَحَ أَوَّلَهَا.

"ಈ ಸಮುದಾಯದ ಮೊದಲಿನವರನ್ನು ಸುಧಾರಣೆಗೊಳಿಸಿದ ಸಂಗತಿ ಯಾವುದೋ ಅದರ ಮೂಲಕವಲ್ಲದೆ ಈ ಸಮುದಾಯದ ನಂತರದವರನ್ನು ಸುಧಾರಣೆಗೊಳಿಸಲು ಸಾಧ್ಯವಿಲ್ಲ."

*35 ನೇ ಪುಟಕ್ಕೆ*

# ದುಡಿಮೆ ಮತ್ತು ಆತ್ಮಾರ್ಥತೆ

ಉನ್ನತ ಸ್ಥಾನದಲ್ಲಿರುವವರು ಅವರ ಹೊಣೆಗಾರಿಕೆಯನ್ನು ಸುಸೂತ್ರವಾಗಿ ನಿರ್ವಹಿಸಿದರೆ ಕಿರಿಯರೂ ಅವರನ್ನು ಅನುಸರಿಸುತ್ತಾರೆ. ಉದ್ಯೋಗದಲ್ಲಿರುವ ಎಲ್ಲಾ ಮೇಲಾಧಿಕಾರಿಗಳು ತಮ್ಮ ಕುರಿತು ಹಾಗೂ ತಮ್ಮ ಕೈಕೆಳಗಿರುವವರ ಕುರಿತು ವಿಚಾರಣೆಗೊಳಪಡಲಿದ್ದಾರೆ.

ಉದ್ಯೋಗವು ಒಂದು ಅಮಾನತ್ತಾಗಿದೆ. ಉದ್ಯೋಗಿ ತನ್ನ ಕೆಲಸವನ್ನು ಆತ್ಮಾರ್ಥವಾಗಿ ನಿರ್ವಹಿಸಿದರೆ ಅವನಿಗೆ ಇಹ–ಪರಗಳಲ್ಲಿ ಪ್ರತಿಫಲ ಲಭಿಸುತ್ತದೆ. ಅಲ್ಲಾಹನ ಪ್ರತಿಫಲವನ್ನು ಬಯಸಿ ಆಸಕ್ತಿಯಿಂದ ಕೆಲಸ ಮಾಡುವವನು ತನ್ನ ಹೊಣೆಗಾರಿಕೆಯನ್ನು ನಿರ್ವಹಿಸಿದವನಾಗುತ್ತಾನೆ. ತನ್ನಿಮಿತ್ತ ಅವನು ಭೌತಿಕವಾಗಿ ಕೆಲಸಕ್ಕಿರುವ ಕೂಲಿಗೆ ಅರ್ಹನಾಗುವನು ಹಾಗೂ ಪರಲೋಕದಲ್ಲಿ ಪ್ರತಿಫಲ ಪಡೆದು ವಿಜಯಶಾಲಿಯಾಗುವನು. ಜನರು ಮಾಡುವ ಕರ್ಮಗಳಿಗೆ ಪ್ರತಿಫಲ ಮತ್ತು ಕೂಲಿ ಉಂಟಾಗುವುದು ಅಲ್ಲಾಹನ ಸಂಪ್ರೀತಿ ಹಾಗೂ ಪ್ರತಿಫಲಾಪೇಕ್ಷೆಯನ್ನು ಆಧರಿಸಿದೆ ಎಂದು ಪ್ರಮಾಣಗಳು ಕಲಿಸುತ್ತದೆ.

ಅಲ್ಲಾಹನು ಹೇಳುತ್ತಾನೆ.

﴿ لَّا خَيْرَ فِي كَثِيرٍ مِّن نَّجْوَاهُمْ إِلَّا
مَنْ أَمَرَ بِصَدَقَةٍ أَوْ مَعْرُوفٍ أَوْ إِصْلَاحٍ بَيْنَ
النَّاسِ ۚ وَمَن يَفْعَلْ ذَٰلِكَ ابْتِغَاءَ مَرْضَاتِ
اللَّهِ فَسَوْفَ نُؤْتِيهِ أَجْرًا عَظِيمًا ﴿١١٤﴾ ﴾

"ಜನರಾಡುವ ಹೆಚ್ಚಿನ ಗುಪ್ತಮಾತುಗಳಲ್ಲಿ ಯಾವ ಹಿತವೂ ಇರುವುದಿಲ್ಲ. ಯಾರಾದರೂ ರಹಸ್ಯ ದಾನ ಧರ್ಮಗಳ ಬೋಧನೆ ನೀಡಿದರೆ ಅಥವಾ ಯಾವುದಾದರೂ ಸತ್ಕಾರ್ಯಕ್ಕೆ ಅಥವಾ ಜನರೊಳಗೆ ಪರಸ್ಪರ ವ್ಯವಹಾರಗಳನ್ನು ಸರಿಪಡಿಸಲಿಕ್ಕಾಗಿ ಪ್ರೇರೇಪಣೆ ನೀಡಿದರೆ ಇದರಲ್ಲಿ ಹಿತವಿದೆ. ಯಾರಾದರೂ ಅಲ್ಲಾಹನ ಸಂಪ್ರೀತಿಯ ಪ್ರಾಪ್ತಿಗಾಗಿ ಹೀಗೆ ಮಾಡಿದರೆ ಅವನಿಗೆ ನಾವು ಹಿರಿದಾದ ಪ್ರತಿಫಲ ನೀಡುವೆವು." (4:114)

ಅಬೂ ಮಸ್‌ಊದ್(ؓ) ಅವರಿಂದ ನಿವೇದನೆ. ಅಲ್ಲಾಹನ ಸಂದೇಶವಾಹಕರು(ﷺ) ಹೇಳಿದರು. "ಒಬ್ಬನು ತನ್ನ ಕುಟುಂಬಕ್ಕೆ ಅಲ್ಲಾಹನಿಂದ ಪ್ರತಿಫಲವನ್ನು ಬಯಸಿ ಖರ್ಚು ಮಾಡಿದರೆ ಅದು ಅವನಿಗೆ ಧರ್ಮವಾಗಿದೆ." (ಬುಖಾರಿ ಮುಸ್ಲಿಮ್)

ಅಲ್ಲಾಹನ ಸಂದೇಶವಾಹಕರು(ﷺ) ಇಬ್ನ್ ಅಬೀ ವಕ್ಕಾಸ್(ؓ) ಅವರೊಂದಿಗೆ ಹೇಳಿದರು. "ಅಲ್ಲಾಹನ ಸಂಪ್ರೀತಿಯನ್ನು ಅರಸಿ ನೀವು ಖರ್ಚು ಮಾಡುವ ಪ್ರತಿಯೊಂದಕ್ಕೂ ಪ್ರತಿಫಲವಿದೆ. ಎಷ್ಟರಮಟ್ಟಿಗೆಂದರೆ ನೀವು ನಿಮ್ಮ ಪತ್ನಿಯ ಬಾಯಿಗೆ ನೀಡುವ ತುತ್ತಿಗೆ ಕೂಡಾ." (ಬುಖಾರಿ ಮುಸ್ಲಿಮ್)

ಒಬ್ಬ ಮುಸ್ಲಿಮನು ಇತರರೊಂದಿಗೆ ತನ್ನ ಮೇಲೆ ಕಡ್ಡಾಯಗೊಳಿಸಲ್ಪಟ್ಟ ಬಾಧ್ಯತೆಯನ್ನು ನಿರ್ವಹಿಸಿದರೆ ಅವನ ಹೊಣೆಗಾರಿಕೆಯನ್ನು ಅವನು ನೆರವೇರಿಸಿದನು. ಆದರೆ ಅವನು ಪ್ರತಿಫಲ ಮತ್ತು ಕೂಲಿ ಪಡೆಯುವುದು ಅಲ್ಲಾಹನ ಮೇಲೆ ಭರವಸೆಯಿಟ್ಟು ಅವನ ಸಂಪ್ರೀತಿಯನ್ನು ಬಯಸುವಾಗ ಮಾತ್ರ. ಮೇಲೆ ಸೂಚಿಸಿದ ಪ್ರಮಾಣ

ವಚನಗಳು ಇದನ್ನೇ ತಿಳಿಸಿಕೊಡುತ್ತದೆ.

## ಉದ್ಯೋಗ ಸಮಯ ಉದ್ಯೋಗಕ್ಕಾಗಿ

ತಮಗೆ ನಿಶ್ಚಯಿಸಲ್ಪಟ್ಟ ಉದ್ಯೋಗಕ್ಕೆ ನಿರ್ಣಿತವಾದ ಸಮಯವನ್ನು ಪ್ರತಿಯೊಬ್ಬ ಉದ್ಯೋಗಿ ಪ್ರಸ್ತುತ ಉದ್ಯೋಗಕ್ಕಾಗಿ ವಿನಿಯೋಗಿಸಬೇಕು. ಆ ಸಮಯದಲ್ಲಿ ಇತರ ಕಾರ್ಯಗಳಲ್ಲಿ ನಿರತರಾಗಿ ಸಮಯ ಕಳೆಯುವುದು ಅಮಾನತ್ತಿನಲ್ಲಿ ಮಾಡುವ ಪ್ರಮಾದವಾಗಿದೆ.

ಮನುಷ್ಯನು ತನ್ನ ಕೂಲಿಯನ್ನು ಸಂಪೂರ್ಣವಾಗಿ ಸ್ವೀಕರಿಸಲು ಬಯಸುತ್ತಾನೆ. ಅದರಲ್ಲಿ ಸ್ವಲ್ಪವೂ ಕಡಿತವಾಗುವುದನ್ನು ಅವನು ಇಷ್ಟಪಡುವುದಿಲ್ಲ. ಆದುದರಿಂದ ಕೆಲಸದ ಸಮಯದಲ್ಲಿ ಕೆಲಸದ ಒಳಿತಿಗಲ್ಲದೆ ಬೇರೆ ಕಾರ್ಯಗಳಿಗೆ ವಿನಿಯೋಗಿಸಿ ಸ್ವಲ್ಪವೂ ಕಡಿತ ಮಾಡದಿರುವುದು ಅವನ ಬಾಧ್ಯತೆಯಾಗಿದೆ.

ತಮ್ಮ ಹಕ್ಕುಗಳನ್ನು ಪೂರ್ಣವಾಗಿ ಪಡೆದು ಇತರರ ಹಕ್ಕುಗಳಲ್ಲಿ ಕೊರತೆ ಉಂಟುಮಾಡುವ, ಅಳತೆ ಮತ್ತು ತೂಕಗಳಲ್ಲಿ ಮೋಸ ಮಾಡುವವರ ಕುರಿತು ಅಲ್ಲಾಹನು ಹೇಳುತ್ತಾನೆ.

﴿ وَيْلٌ لِّلْمُطَفِّفِينَ ١ ٱلَّذِينَ إِذَا ٱكْتَالُوا۟ عَلَى ٱلنَّاسِ
يَسْتَوْفُونَ ٢ وَإِذَا كَالُوهُمْ أَو وَّزَنُوهُمْ يُخْسِرُونَ
٣ أَلَا يَظُنُّ أُو۟لَـٰٓئِكَ أَنَّهُم مَّبْعُوثُونَ ٤ لِيَوْمٍ
عَظِيمٍ ٥ يَوْمَ يَقُومُ ٱلنَّاسُ لِرَبِّ ٱلْعَـٰلَمِينَ ٦ ﴾

"ತೂಕದಲ್ಲಿ ಕಡಿತಗೊಳಿಸಿ ಕೊಡುವವರಿಗೆ ವಿನಾಶವಿದೆ. ಅವರು ಜನರಿಂದ ಪಡೆಯುವಾಗ ಸಂಪೂರ್ಣವಾಗಿ ಪಡೆಯುತ್ತಾರೆ. ಮತ್ತು ಅಳತೆ ಮಾಡಿ ಅಥವಾ ತೂಕ ಮಾಡಿ ಕೊಡುವಾಗ ಕಡಿಮೆ ಕೊಡುತ್ತಾರೆ. ಇವರನ್ನು ಎಬ್ಬಿಸಿ ತರಲಾಗುವುದೆಂದು ಇವರು ಗ್ರಹಿಸುವುದಿಲ್ಲ. ಒಂದು ಮಹಾ ದಿನದಂದು. (ಅದು) ಎಲ್ಲ ಜನರೂ ಸರ್ವಲೋಕ ಪಾಲಕ ಪ್ರಭುವಿನ ಮುಂದು ನಿಲ್ಲುವ ದಿನವಾಗಿದೆ." (83:1–6)

## ಉದ್ಯೋಗಿಯಲ್ಲಿರಬೇಕಾದ ಮೂಲಭೂತ ಅರ್ಹತೆಗಳು

ಉದ್ಯೋಗಸ್ತ ಮತ್ತು ಕೆಲಸಗಾರನನ್ನು ಆರಿಸುವಾಗ ಅವರು ಸಮರ್ಥ (ಕವಿಯ್ಯ್) ನಂಬಿಗಸ್ಥ (ಅಮೀನ್) ಆಗಿದ್ದಾರೆಯೇ ಎಂಬುದನ್ನು ಆಧಾರವಾಗಿಟ್ಟುಕೊಳ್ಳಬೇಕು. ಏಕೆಂದರೆ ಸಾಮರ್ಥ್ಯವಿದ್ದರೆ ಮಾತ್ರ ಅವನ ತನಗೆ ಒಪ್ಪಿಸಲಾಗುವ ಕೆಲಸವನ್ನು ನಿರ್ವಹಿಸಬಲ್ಲ. ಅಮಾನತ್ತ್ ಮಾತ್ರವೇ ತನಗೆ ಒಪ್ಪಿಸಲಾದ ಕೆಲಸ ತನ್ನನ್ನು ಬಾಧ್ಯತೆಯಿಂದ ಮುಕ್ತಗೊಳಿಸುವ ವಿಧದಲ್ಲಿ ಅವನು ನಿರ್ವಹಿಸಬಲ್ಲ. ಅಂದರೆ ಅಮಾನತ್ತ್ ಮೂಲಕ ಕಾರ್ಯವನ್ನು ಅದರದ್ದೇ ಆದ ಸ್ಥಾನದಲ್ಲಿಡಲು ಮತ್ತು ಕುವ್ವತ್ (ಶಕ್ತಿ) ಯಿಂದ ಹೊಣೆಗಾರಿಕೆಯನ್ನು ನಿರ್ವಹಿಸಲು ಸಾಧ್ಯವಾಗುತ್ತದೆ ಎಂಬುದು ಇಲ್ಲಿಯ ತಿರುಳಾಗಿದೆ.

ಪ್ರವಾದಿ ಮೂಸಾ(عليه السلام) ರು ಮದ್ಯನ್ ನಿವಾಸಿಯಾದ ಒಬ್ಬ ವ್ಯಕ್ತಿಯ ಇಬ್ಬರು ಹೆಣ್ಮಕ್ಕಳಿಗೆ ನೀರು ಸೇದಿ ಕೊಟ್ಟಾಗ ಅವರಲ್ಲಿ ಒಬ್ಬಳು ಮೂಸಾ(عليه السلام) ರ ಕುರಿತು ಹೀಗೆ ಹೇಳಿರುವುದಾಗಿ ಕುರ್‌ಆನ್ ಹೇಳುತ್ತದೆ.

﴿ قَالَتْ إِحْدَىٰهُمَا يَـٰٓأَبَتِ ٱسْتَـْٔجِرْهُ ۖ إِنَّ خَيْرَ
مَنِ ٱسْتَـْٔجَرْتَ ٱلْقَوِىُّ ٱلْأَمِينُ ٢٦ ﴾

"ಆ ಇಬ್ಬರು ಮಹಿಳೆಯರಲ್ಲಿ ಒಬ್ಬಳು ತನ್ನ ತಂದೆಯೊಡನೆ, ಅಪ್ಪಾ! ಇವರನ್ನು ನೌಕರರಾಗಿ ಇರಿಸಿಕೊಳ್ಳಿರಿ. ನೀವು ನೌಕರರಾಗಿ ಇರಿಸಿಕೊಳ್ಳುವವರು ಬಲಿಷ್ಠನೂ ಪ್ರಾಮಾಣಿಕನೂ ಆಗಿರಬೇಕಲ್ಲವೇ ಎಂದಳು." (28:26)

ಪ್ರವಾದಿ ಸುಲೈಮಾನರಿಗಾಗಿ ಸಬಾದ ರಾಣಿ ಬಲ್ಕೀಸಳ ಸಿಂಹಾಸನವನ್ನು ತರಲು ಮುಂದಾದ ಜಿನ್ನ್ ವರ್ಗಕ್ಕೆ ಸೇರಿದ ಇಫ್ರೀತ್ ಹೇಳಿರುವುದಾಗಿ ಕುರ್‌ಆನ್ ವಿವರಿಸುತ್ತದೆ.

﴿ قَالَ عِفْرِيتٌ مِّنَ ٱلْجِنِّ أَنَا۠ ءَاتِيكَ بِهِۦ قَبْلَ أَن
تَقُومَ مِن مَّقَامِكَ ۖ وَإِنِّى عَلَيْهِ لَقَوِىٌّ أَمِينٌ ٣٩ ﴾

"ತಾವು ತಮ್ಮ ಸ್ಥಾನದಿಂದ ಏಳುವುದಕ್ಕಿಂತ ಮುಂಚೆಯೇ ನಾನು ಅದನ್ನು ತಂದು ಹಾಜರುಪಡಿಸುವೆನು. ನಾನು ಅದಕ್ಕೆ ಶಕ್ತನೂ ಪ್ರಾಮಾಣಿಕನೂ ಆಗಿದ್ದೇನೆ." (ಅನ್ನಮ್ಲ್ 39)

ಸಿಂಹಾಸನವನ್ನು ಹೊತ್ತುಕೊಂಡು ಹಾಜರುಪಡಿಸುವ ಸಾಮರ್ಥ್ಯ ಹಾಗೂ ಅದರ ರಕ್ಷಣೆಯನ್ನು ಒಟ್ಟುಸೇರಿಸಿ ಹೇಳಿದರು ಎಂದರ್ಥ.

ಪ್ರವಾದಿ ಯೂಸುಫ್(عليه السلام) ರೊಡನೆ ಅಲ್ಲಾಹು ಹೇಳುತ್ತಾನೆ.



“(ಯೂಸುಫ್) ಹೇಳಿದರು. ಭೂಮಿಯ ಭಂಡಾರಗಳನ್ನು ನನ್ನ ವಶಕ್ಕೆ ನೀಡಿರಿ. ನಿಶ್ಚಯವಾಗಿಯೂ ನಾನು ರಕ್ಷಣೆ ಮಾಡುವವನೂ ತಿಳುವಳಿಕೆಯುಳ್ಳವನೂ ಆಗಿರುತ್ತೇನೆ.” (12:55)

ಅಶಕ್ತಿ ಮತ್ತು ವಂಚನೆ ಶಕ್ತಿ ಮತ್ತು ನಂಬಿಕೆಗೆ ವಿರುದ್ಧವಾಗಿದೆ. ಅಶಕ್ತಿ ಮತ್ತು ವಂಚನೆ ಜನರನ್ನು ಕೆಲಸಕ್ಕೆ ಸೇರಿಸದಿರುವ ಹಾಗೂ ಕೆಲಸದಿಂದ ತೆಗೆದು ಹಾಕುವ ನಿಜವಾದ ಸಮರ್ಥನೆಯಾಗಿದೆ.

ಉಮರ್(ﷺ) ಕಅ್‌ಬ್(ﷺ) ರನ್ನು ಕೂಫಾದ ಅಮೀರ್ ಆಗಿ ನೇಮಿಸಿದಾಗ ಅಲ್ಲಿಯ ತಿಳಿಗೇಡಿಗಳು ಸಅ್‌ದ್(ﷺ) ರ ಕುರಿತು ಆಕ್ಷೇಪವೆತ್ತಿದರು. ಅವರು ಉಮರ್(ﷺ) ರವರ ಸಮ್ಮುಖ ಸಅ್‌ದ್ (ﷺ) ರಿಗೆ ವಿರುದ್ಧವಾಗಿ ಮಾತನಾಡಿದರು. ಈ ಸಂದರ್ಭದಲ್ಲಿ ಉಮರ್(ﷺ) ರವರು ಅರಾಜಕತೆಯನ್ನು ತಪ್ಪಿಸಲು ಮತ್ತು ಯಾರೂ ಸಅ್‌ದ್(ﷺ) ಮೇಲೆ ಏರಿ ಹೋಗಬಾರದೆಂಬ ಕಾರಣದಿಂದ ಅವರನ್ನು ಕೂಫಾದ ಅಮೀರ್ ಸ್ಥಾನದಿಂದ ಬದಲಾಯಿಸುವುದೇ ಉತ್ತಮವೆಂದು ಭಾವಿಸಿದರು. ಆದರೆ ಉಮರ್(ﷺ) ರವರು ಮರಣಾಸನ್ನರಾದ ವೇಳೆಯಲ್ಲಿ ಮುಂದಿನ ಖಲೀಫರನ್ನು ಆರಿಸಲು ನೇಮಿಸಿದ ಆರು ಸ್ವಹಾಬಿಗಳಲ್ಲಿ ಸಅ್‌ದ್(ﷺ) ಒಳಪಟ್ಟಿದ್ದರು. ಸಅ್‌ದ್(ﷺ) ಆಡಳಿತದ ನಾಯಕತ್ವಕ್ಕೆ ಸೂಕ್ತವಾದ ವ್ಯಕ್ತಿಯಲ್ಲ ಎಂಬ ಕಾರಣದಿಂದ ನಾನು ಅವರನ್ನು ಅಮೀರ್ ಸ್ಥಾನದಿಂದ ಕೆಳಗಿಳಿಸಿದೆ ಎಂಬ ತಪ್ಪುಕಲ್ಪನೆಗೆ ಕಾರಣವಾಗಬಹುದೆಂದು ಉಮರ್(ﷺ) ಭಯಪಟ್ಟರು. ಪ್ರಸ್ತುತ ತಪ್ಪುಕಲ್ಪನೆಯನ್ನು ಅವರು ಈ ಕೆಳಗಿನ ಹೇಳಿಕೆಯ ಮೂಲಕ ನಿವಾರಿಸಿದರು.

“ಖಿಲಾಫತ್ ಸಅ್‌ದ್(ﷺ) ರಿಗೆ ಲಭಿಸುವುದಾದರೆ ಅವರೇ ಖಲೀಫರಾಗಬೇಕು. ಅವರನ್ನು ಹೊರತುಪಡಿಸಿ ಬೇರೆಯವರು ಖಲೀಫರಾಗಿ ನಿಶ್ಚಯಿಸಲ್ಪಟ್ಟರೆ ಅವರು ಸಅ್‌ದ್(ﷺ) ರನ್ನು ಸಹಾಯಕರಾಗಿ ಸ್ವೀಕರಿಸಬೇಕು. ಏಕೆಂದರೆ ನಾನು ಸಅ್‌ದ್(ﷺ) ರನ್ನು ಅವರ ಅಸಾಮರ್ಥ್ಯ ಅಥವಾ ವಂಚನೆಯ ಕಾರಣದಿಂದ ಸ್ಥಾನಭ್ರಷ್ಟಗೊಳಿಸಿಲ್ಲ.” (ಬುಖಾರಿ)

ಅಬೂದರ್(ﷺ) ಅವರಿಂದ ನಿವೇದನೆ. ಅವರು ಕೇಳಿದರು. “ಓ ಅಲ್ಲಾಹನ ಸಂದೇಶವಾಹಕರೇ! ನೀವು ನನ್ನನ್ನು ರಾಜ್ಯಪಾಲರನ್ನಾಗಿ ನೇಮಿಸುವುದಿಲ್ಲವೇ?” ಆಗ ಪ್ರವಾದಿ(ﷺ) ಯವರು ತಮ್ಮ ಕೈಯಿಂದ ನನ್ನ ಎರಡು ಭುಜಗಳನ್ನು ತಟ್ಟಿ ಹೀಗೆಂದರು. “ಅಬೂದರ್! ನೀವು ದುರ್ಬಲರು. ನಾಯಕತ್ವದ ಪದವಿ ಅಮಾನತ್ತಾಗಿದೆ. ನೇತೃತ್ವವನ್ನು ವಹಿಸಿಕೊಂಡು ಅದರಲ್ಲಿ ತಮ್ಮ ಬಾಧ್ಯತೆಯನ್ನು ನಿರ್ವಹಿಸದವರ ಮಟ್ಟಿಗೆ ಅಂತ್ಯದಿನದಲ್ಲಿ ಅದು ಅಪಮಾನ ಮತ್ತು ನಿಂದ್ಯ-ತೆಯಾಗಿದೆ.” (ಮುಸ್ಲಿಮ್)

ಅಬೂದರ್ ಅವರಿಂದ ವರದಿಯಾದ ಮತ್ತೊಂದು ಹದೀಸಿನಲ್ಲಿ ಹೀಗಿದೆ. “ಅಬೂದರ್! ನಾನು ನಿಮ್ಮನ್ನು ದುರ್ಬಲನಾಗಿ ಕಾಣು-ತ್ತಿದ್ದೇನೆ. ನನಗೆ ನಾನು ಮೆಚ್ಚುವುದನ್ನು ನಿಮಗೂ ಮೆಚ್ಚುತ್ತೇನೆ. ನೀವು ಇಬ್ಬರ ನೇತೃತ್ವ ಪದವಿಯನ್ನು ಅಲಂಕರಿಸಬಾರದು. ಹಾಗೆಯೇ ಅನಾಥರ ಸಂಪತ್ತಿನ ಹೊಣೆಯನ್ನೂ ವಹಿಸಿಕೊ-ಳ್ಳಬಾರದು.” (ಮುಸ್ಲಿಮ್)

## ಹಿರಿಯರು ಕಿರಿಯರಿಗೆ ಮಾದರಿ

ಜವಾಬ್ದಾರಿಯುತ ಹಿರಿಯರು ಕಾರ್ಯಕ್ಷಮತೆ ಮತ್ತು ಜಡತೆ ಇವೆರಡರಲ್ಲೂ ಒಂದೇ ರೀತಿಯಲ್ಲಿ ಮಾದರಿಯಾಗಿದ್ದಾರೆ. ಉನ್ನತ ಸ್ಥಾನದಲ್ಲಿರುವವರು ಅವರ ಹೊಣೆಗಾರಿಕೆಯನ್ನು ಸುಸೂತ್ರವಾಗಿ ನಿರ್ವಹಿಸಿದರೆ ಕಿರಿಯರೂ ಅವರನ್ನು ಅನುಸರಿಸುತ್ತಾರೆ. ಉದ್ಯೋಗ-ದಲ್ಲಿರುವ ಎಲ್ಲಾ ಮೇಲಾಧಿಕಾರಿಗಳು ತಮ್ಮ ಕುರಿತು ಹಾಗೂ ತಮ್ಮ ಕೈಕೆಳಗಿರುವವರ ಕುರಿತು ವಿಚಾರಣೆಗೊಳಪಡಲಿದ್ದಾರೆ.

ಅಬ್ದುಲ್ಲಾಹಿಬಿನ್ ಉಮರ್(ﷺ) ಅವರಿಂದ ನಿವೇದನೆ. ಅಲ್ಲಾಹನ ಸಂದೇಶವಾಹಕರು ಹೇಳಿದರು. “ನೀವೆಲ್ಲರೂ ಆಡಳಿತಗಾರರಾಗಿ-ದ್ದೀರಿ. ನಿಮ್ಮ ಪ್ರಜೆಗಳ ಕುರಿತು ವಿಚಾರಣೆಗೆ ಗುರಿಯಾಗಲಿರುವಿರಿ. ಜನರಿಗೆ ನಾಯಕನಾಗಿರುವವನು ಅವರ ಮೇಲ್ನೋಟಗಾರನಾಗಿ-ದ್ದಾನೆ. ಅವನು ಅವರ ಕುರಿತು ಪ್ರಶ್ನಿಸಲ್ಪಡುವನು. ಪುರುಷನು ತನ್ನ ಕುಟುಂಬದ ಮೇಲ್ವಿಚಾರಕ. ಅವನು ಕುಟುಂಬದ ಕುರಿತು ಪ್ರಶ್ನಿಸ-ಲ್ಪಡುವನು. ಸ್ತ್ರೀ ಪತಿಯ ಮನೆ ಹಾಗೂ ಮಕ್ಕಳ ಮೇಲ್ವಿಚಾರಕಿ. ಆಕೆ ಅವರ ಕುರಿತು ವಿಚಾರಿಸಲ್ಪಡುವಳು. ಸೇವಕನು ತನ್ನ ಒಡೆಯನ ಸೊತ್ತು ಕೈವಶವುಳ್ಳವನು. ಆತ ಅದರ ಕುರಿತು ವಿಚಾರಣೆಗೆ ಗುರಿಯಾಗುವನು. ತಿಳಿಯಿರಿ! ಆದುದರಿಂದ ನೀವೆಲ್ಲರೂ ಮೇಲ್ವಿ-ಚಾರಕರು. ನೀವು ಮೇಲ್ನೋಟ ನಡೆಸುತ್ತಿರುವವರ ಕುರಿತು ಪ್ರಶ್ನಿ-ಸಲ್ಪಡುವಿರಿ.” (ಬುಖಾರಿ)

ಉನ್ನತ ಉದ್ಯೋಗದಲ್ಲಿರುವವರು ಎಲ್ಲಾ ಸಮಯಗಳಲ್ಲಿ ತಮ್ಮ ಕೆಲಸದ ಬಗ್ಗೆ ನಿಗಾ ವಹಿಸುವವರಾದರೆ ಅವರು ತಮ್ಮ ಕೆಳಗಿನವ-ರಿಗೆ ಅತ್ಯುತ್ತಮ ಮಾದರಿಯಾಗಿದ್ದಾರೆ. ■

# ಪ್ರಪಂಚದೆಡೆಗೆ ಕಣ್ಣು ತೆರೆಯಿರಿ!

ಪ್ರಪಂಚವು ಜ್ಞಾನದ ಅಕ್ಷಯ ಗಣಿಗಳಿಂದ ತುಂಬಿದೆ. ಅದರಿಂದ ಪ್ರತಿಯೊಂದು ಮುತ್ತುಗಳು ಕಂಡುಹಿಡಿಯಲ್ಪಟ್ಟಾಗ ಪ್ರಪಂಚದೊಡೆಯ ಮತ್ತು ಅವನ ನಿಸ್ತುಲವಾದ ಸಾಮರ್ಥ್ಯಗಳ ಕುರಿತು ತಿಳಿಯುವುದರಲ್ಲಿ ಸಂಶಯವಿಲ್ಲ. ಕುಂದು-ಕೊರತೆಗಳಿಂದ ಮುಕ್ತವಾದ ರೀತಿಯಲ್ಲಿರುವ ಪ್ರತಿಯೊಂದು ಸ್ಥೂಲ-ಸೂಕ್ಷ್ಮ ಜೀವಿ ಹಾಗೂ ಸಕಲ ವಸ್ತುಗಳ ಸೃಷ್ಟಿಯ ಹಿನ್ನೆಲೆಯಲ್ಲಿ ಕೇವಲ ಆಕಸ್ಮಕತೆ ಇರದೆ ಅವೆಲ್ಲವೂ ಸರ್ವಜ್ಞನೂ, ಸರ್ವಶಕ್ತನೂ ಆದ ಅಲ್ಲಾಹನ ಯೋಜನಾಬದ್ಧ, ಸುವ್ಯವಸ್ಥಿತ ಸೃಷ್ಟಿಯಾಗಿದೆಯೆಂದು ಚಿಂತಿಸುವವರು ಖಂಡಿತ ತಿಳಿದುಕೊಳ್ಳಬಲ್ಲರೆಂದೇ ಪವಿತ್ರ ಕುರ್‌ಆನ್ ಅನೇಕ ಬಾರಿ ಚಿಂತನೆ, ವಿಚಾರ, ಆಲೋಚನೆಗಳಿಗೆ ಕರೆ ನೀಡುತ್ತದೆ.

ಜ್ಞಾನ ಸಂಪಾದಿಸಲು ಇಸ್ಲಾಮಿಷ್ಟು ಪ್ರೋತ್ಸಾಹಿಸಿದ ಧರ್ಮವಾಗಲಿ, ಸಿದ್ಧಾಂತವಾಗಲಿ ಲೋಕದಲ್ಲಿಲ್ಲ ಎಂದು ಹೇಳಿದರೆ ಅದರಲ್ಲಿ ಸ್ವಲ್ಪವೂ ಅತಿಶಯೋಕ್ತಿಯಿಲ್ಲ. ಪ್ರವಾದಿ(ﷺ)ಯವರಿಗೆ ಪ್ರಥಮವಾಗಿ ಅವತೀರ್ಣವಾದ ಕುರ್‌ಆನಿನ ವಚನಗಳು ಓದು, ಅಧ್ಯಯನ ಮತ್ತು ಚಿಂತನೆಗಳಿಗೆ ಪ್ರೇರಣೆಯಾಗುವುದನ್ನು ನಾವು ನೋಡಬಹುದಾಗಿದೆ.

ಪೂರ್ವಿಕ ಮುಸ್ಲಿಮ್ ಸಮುದಾಯವು ಕುರ್‌ಆನ್ ಮತ್ತು ಪ್ರವಾದಿ(ﷺ)ಯವರ ಉಪದೇಶಗಳನ್ನು ಮೈಗೂಡಿಸಿಕೊಂಡು ಜ್ಞಾನದ ಎಲ್ಲಾ ಪ್ರಕಾರಗಳಲ್ಲಿ ಪರಿಣತೆಯನ್ನು ಪಡೆಯಲು ಪ್ರಯತ್ನಿಸಿದ್ದರೆಂದು ಚರಿತ್ರೆಯು ಸ್ಪಷ್ಟಪಡಿಸುತ್ತದೆ. ರಾಜಕೀಯ ಮತ್ತು ಸಾಮಾಜಿಕ ಕಾರಣಗಳಿಗಾಗಿ ನಂತರದ ಕಾಲಾವಧಿಯಲ್ಲಿ ಮುಸ್ಲಿಮ್ ಜಗತ್ತು ಈ ರಂಗದಲ್ಲಿ ಸ್ವಲ್ಪ ಹಿಂದುಳಿಯಿತು ಎನ್ನುವುದು ಸತ್ಯವಾಗಿದೆ.

ಆಳವಾದ ಅಧ್ಯಯನ ಮತ್ತು ಚಿಂತನೆಯಿಂದ ದೇವಾಸ್ತಿತ್ವವನ್ನು ತಿಳಿಯಲು ಸಾಧ್ಯವಿದೆ ಎಂಬುದರಲ್ಲಿ ಸಂಶಯವಿಲ್ಲ. ಸೃಷ್ಟಿಯ ವಿವಿಧ ದಿಶೆಗಳಿಗೆ ಸಂಬಂಧಪಟ್ಟಂತೆ ಕುರ್‌ಆನ್ ನೀಡುವ ವಿವರಣೆ ಮತ್ತು ಜ್ಞಾನಗಳು ವಿಶ್ವಾಸವನ್ನು ದೃಢೀಕರಿಸಲು ಪರ್ಯಾಪ್ತವಾಗಿದೆ.

﴿إِنَّ فِي خَلْقِ السَّمَاوَاتِ وَالْأَرْضِ وَاخْتِلَافِ
اللَّيْلِ وَالنَّهَارِ وَالْفُلْكِ الَّتِي تَجْرِي فِي الْبَحْرِ
بِمَا يَنفَعُ النَّاسَ وَمَا أَنزَلَ اللَّهُ مِنَ السَّمَاءِ مِن مَّاءٍ
فَأَحْيَا بِهِ الْأَرْضَ بَعْدَ مَوْتِهَا وَبَثَّ فِيهَا مِن كُلِّ
دَابَّةٍ وَتَصْرِيفِ الرِّيَاحِ وَالسَّحَابِ الْمُسَخَّرِ بَيْنَ
السَّمَاءِ وَالْأَرْضِ لَآيَاتٍ لِّقَوْمٍ يَعْقِلُونَ ﴿١٦٤﴾﴾

"ಆಕಾಶಗಳು ಮತ್ತು ಭೂಮಿಯ ನಿರ್ಮಾಣದಲ್ಲಿ, ಇರುಳು ಹಗಲುಗಳು ಒಂದರ ಹಿಂದೆ ಇನ್ನೊಂದರಂತೆ ನಿರಂತರವಾಗಿ ಬರುತ್ತಿರುವುದರಲ್ಲಿ, ಜನೋಪಯೋಗಿ ಸಾಮಾಗ್ರಿಗಳನ್ನು ಹೊತ್ತು ಸಮುದ್ರಗಳಲ್ಲಿ ಸಂಚರಿಸುವ ನೌಕೆಗಳಲ್ಲಿ, ಅಲ್ಲಾಹನು ಆಕಾಶದಿಂದ ಸುರಿಸಿ ಅದರ ಮೂಲಕ ಭೂಮಿಯನ್ನು ನಿರ್ಜೀವಾವಸ್ಥೆಯ ಬಳಿಕ ಸಜೀವಗೊಳಿಸಿ, ಈ ವ್ಯವಸ್ಥೆಯ ಮೂಲಕ ಭೂಮಿಯಲ್ಲಿ ತರತರದ ಜೀವರಾಶಿಗಳು ಹರಡಿರುವಂತೆ ಮಾಡಿದ ಮಳೆ ನೀರಿನಲ್ಲಿ, ಮಾರುತಗಳ ಚಲನೆಯಲ್ಲಿ ಹಾಗೂ ಆಕಾಶ ಮತ್ತು ಭೂಮಿಯ ನಡುವೆ ನಿಯಂತ್ರಿಸಲ್ಪಟ್ಟಿರುವ ಮೋಡಗಳಲ್ಲಿ ನಿಶ್ಚಯವಾಗಿಯೂ

ಚಿಂತಿಸುವ ಜನರಿಗೆ ಅನೇಕ ದೃಷ್ಟಾಂತಗಳಿವೆ.” (ಕುರ್‌ಆನ್ 2:164)

ಪವಿತ್ರ ಕುರ್‌ಆನ್ ಪ್ರಪಂಚದ ಪ್ರವೃತ್ತನ ರೀತಿಯಾದ ಪ್ರಕೃತಿಯ ವಿವಿಧ ಘಟಕಗಳು, ಅವುಗಳ ಕ್ರಮೀಕರಣ ಹಾಗೂ ವೈವಿಧ್ಯಗಳನ್ನು ಎತ್ತಿ ಹೇಳುವ ಮೂಲಕ ಸೃಷ್ಟಿಕರ್ತನ ವೈಭವಪೂರ್ಣವಾದ ಹಸ್ತಕ್ಷೇಪವನ್ನು ನೆನಪಿಸಿಕೊಟ್ಟು ಸತ್ಯವಿಶ್ವಾಸ ಸ್ವೀಕರಿಸಬೇಕಾದ ಅನಿವಾರ್ಯತೆಯನ್ನು ಮನವರಿಕೆ ಮಾಡಿಕೊಡುತ್ತದೆ.

﴿ هُوَ ٱلَّذِى جَعَلَ ٱلشَّمْسَ ضِيَآءً وَٱلْقَمَرَ
نُورًا وَقَدَّرَهُۥ مَنَازِلَ لِتَعْلَمُوا۟ عَدَدَ ٱلسِّنِينَ
وَٱلْحِسَابَ ۚ مَا خَلَقَ ٱللَّهُ ذَٰلِكَ إِلَّا بِٱلْحَقِّ ۚ يُفَصِّلُ
ٱلْـَٔايَـٰتِ لِقَوْمٍ يَعْلَمُونَ ﴿٥﴾ إِنَّ فِى ٱخْتِلَـٰفِ
ٱلَّيْلِ وَٱلنَّهَارِ وَمَا خَلَقَ ٱللَّهُ فِى ٱلسَّمَـٰوَٰتِ
وَٱلْأَرْضِ لَـَٔايَـٰتٍ لِّقَوْمٍ يَتَّقُونَ ﴿٦﴾ ﴾

“ಸೂರ್ಯನನ್ನು ಪ್ರಕಾಶಮಾನವನ್ನಾಗಿ ಮಾಡಿದವನೂ, ಚಂದ್ರನಿಗೆ ಹೊಳಪನ್ನು ಕೊಟ್ಟವನೂ, ನೀವು ವರ್ಷಗಳ ಎಣಿಕೆಗಳನ್ನೂ ಸಮಯದ ಗಣನೆಯನ್ನೂ ತಿಳಿದುಕೊಳ್ಳಲಿಕ್ಕಾಗಿ ಅದರ ವೃದ್ಧಿ–ಕ್ಷಯಗಳ ಘಟ್ಟಗಳನ್ನು ನಿರ್ಣಯಿಸಿ ಕೊಟ್ಟವನೂ ಅವನೇ. ಅಲ್ಲಾಹನು ಇವೆಲ್ಲವುಗಳನ್ನು ಸತ್ಯಪೂರ್ಣವಾಗಿಯೇ ಸೃಷ್ಟಿಸಿದನು. ಅವನು ಅರಿವುಳ್ಳವರಿಗೆ ತನ್ನ ದೃಷ್ಟಾಂತಗಳನ್ನು ವಿವರಿಸುತ್ತಾನೆ. ನಿಶ್ಚಯವಾಗಿಯೂ ರಾತ್ರಿ–ಹಗಲುಗಳು ಒಂದನ್ನೊಂದು ಹಿಂಬಾಲಿಸಿಕೊಂಡು ಬರುವುದರಲ್ಲಿಯೂ ಅಲ್ಲಾಹನು ಆಕಾಶ ಭೂಮಿಗಳಲ್ಲಿ ಸೃಷ್ಟಿಸಿರುವ ಪ್ರತಿಯೊಂದು ವಸ್ತುವಿನಲ್ಲಿಯೂ ಭಯಪಡುವವರಿಗೆ ದೃಷ್ಟಾಂತಗಳಿವೆ.” (10:5–6)

﴿ أَلَمْ تَرَ أَنَّ ٱللَّهَ خَلَقَ ٱلسَّمَـٰوَٰتِ
وَٱلْأَرْضَ بِٱلْحَقِّ ۚ ﴾

“ಅಲ್ಲಾಹು ಆಕಾಶ–ಭೂಮಿಗಳ ಸೃಷ್ಟಿಯನ್ನು ಸತ್ಯಪೂರ್ಣವಾಗಿ ನೆಲೆನಿಲ್ಲಿಸಿರುವುದನ್ನು ನೀವು ಕಾಣುವುದಿಲ್ಲವೇ?” (14:19)

ಪ್ರಪಂಚವು ಜ್ಞಾನದ ಅಕ್ಷಯ ಗಣಿಗಳಿಂದ ತುಂಬಿದೆ. ಅದರಿಂದ ಪ್ರತಿಯೊಂದು ಮುತ್ತುಗಳು ಕಂಡುಹಿಡಿಯಲ್ಪಟ್ಟಾಗ ಪ್ರಪಂಚದೊಡೆಯ ಮತ್ತು ಅವನ ನಿಸ್ತುಲವಾದ ಸಾಮರ್ಥ್ಯಗಳ ಕುರಿತು ತಿಳಿಯುವುದರಲ್ಲಿ ಸಂಶಯವಿಲ್ಲ. ಕುಂದು–ಕೊರತೆಗಳಿಂದ ಮುಕ್ತವಾದ ರೀತಿಯಲ್ಲಿರುವ ಪ್ರತಿಯೊಂದು ಸ್ಥೂಲ–ಸೂಕ್ಷ್ಮ ಜೀವಿ ಹಾಗೂ ಸಕಲ ವಸ್ತುಗಳ ಸೃಷ್ಟಿಯ ಹಿನ್ನೆಲೆಯಲ್ಲಿ ಕೇವಲ ಆಕಸ್ಮಕತೆ ಇರದೆ ಅವೆಲ್ಲವೂ ಸರ್ವಜ್ಞನೂ, ಸರ್ವಶಕ್ತನೂ ಆದ ಅಲ್ಲಾಹನ ಯೋಜನಾಬದ್ಧ, ಸುವ್ಯವಸ್ಥಿತ ಸೃಷ್ಟಿಯಾಗಿದೆಯೆಂದು ಚಿಂತಿಸುವವರು ಖಂಡಿತ ತಿಳಿದುಕೊಳ್ಳಬಲ್ಲರೆಂದೇ ಪವಿತ್ರ ಕುರ್‌ಆನ್ ಅನೇಕ ಬಾರಿ ಚಿಂತನೆ, ವಿಚಾರ, ಆಲೋಚನೆಗಳಿಗೆ ಕರೆ ನೀಡುತ್ತದೆ. ■

*30 ನೇ ಪುಟದಿಂದ*

## ಶತ್ರುಗಳ ವಿರುದ್ಧ ಜಾಗೃತರಾಗಿರಿ!

ಮಾತ್ರವಲ್ಲ, ಈ ಶತ್ರುಗಳು ಸತ್ಯದ ಕಡೆಗೆ ಆಮಂತ್ರಿಸುವವರನ್ನು ಬಹಳ ಕೆಟ್ಟ ಪದಗಳನ್ನು ಬಳಸಿ ನಿಂದಿಸುತ್ತಾರೆ. ಕಾಫಿರ್‌ಗಳೆಂದು ಜರೆಯುತ್ತಾರೆ. ಉಗ್ರವಾದಿಗಳು ಮತ್ತು ಭಯೋತ್ಪಾದಕರೆಂದು ಕರೆಯುತ್ತಾರೆ.

﴿ يُرِيدُونَ أَن يُطْفِـُٔوا۟ نُورَ ٱللَّهِ بِأَفْوَٰهِهِمْ ﴾

“ಅವರು ಅವರ ಬಾಯಿಯ ಮೂಲಕ ಅಲ್ಲಾಹನ ಬೆಳಕನ್ನು ನಂದಿಸಲು ಬಯಸುತ್ತಾರೆ.” (ಕುರ್‌ಆನ್ 9:32)

ಓ ಅಲ್ಲಾಹನ ದಾಸರೇ! ನಿಮ್ಮ ಶತ್ರುಗಳ ವಿರುದ್ಧ, ಪ್ರವಾದಿಗಳ ದಅ್‌ವತ್ತನ್ನು ವಿರೋಧಿಸುವವರ ವಿರುದ್ಧ, ಸಲಫುಸ್ಸಾಲಿಹ್‌ಗಳ ಮಾರ್ಗವನ್ನು ವಿರೋಧಿಸುವವರ ವಿರುದ್ಧ ಜಾಗೃತರಾಗಿರಿ. ನಿಮಗೆ ಅರಿವಿಲ್ಲದಂತೆ ಅವರು ನಿಮ್ಮನ್ನು ನರಕವಾಸಿಗಳನ್ನಾಗಿ ಮಾಡಲು ಬಯಸುತ್ತಾರೆ.

ತಿಳಿಯಿರಿ! ಅತ್ಯುತ್ತಮವಾದ ವಚನ ಅಲ್ಲಾಹನ ಗ್ರಂಥವಾಗಿದೆ. ಅತ್ಯುತ್ತಮವಾದ ಚರ್ಯೆ ಪ್ರವಾದಿ ಮುಹಮ್ಮದ್(ﷺ) ರವರ ಚರ್ಯೆಯಾಗಿದೆ. ವಿಷಯಗಳಲ್ಲೇ ಅತಿನಿಕೃಷ್ಟವಾದುದು ನೂತನಾಚಾರಗಳಾಗಿವೆ. ಎಲ್ಲ ನೂತನಾಚಾರಗಳೂ ಪಥಭ್ರಷ್ಟತೆಯಾಗಿವೆ. ಸಹೋದರರೇ! ಸಂಘಟಿತರಾಗಿರಿ. ಏಕೆಂದರೆ ಅಲ್ಲಾಹನ ಕೈಯಿರುವುದು ಸಂಘಟನೆಯೊಂದಿಗೆ. ಒಂಟಿಯಾಗಿರುವವನು ನರಕಾಗ್ನಿಯಲ್ಲಿ ಒಂಟಿಯಾಗಿ ಬಿಡುವನು. ■




# ತತ್ವನಿಷ್ಠೆ

ಡಾ. ಮುಹಮ್ಮದ್ ಅಬ್ದುರ್ರಹ್ಮಾನ್ ಅರೀಫಿ

ಮನುಷ್ಯನ ವ್ಯಕ್ತಿತ್ವವು ಎಷ್ಟು ಸುದೃಢವಾಗಿರುವುದೋ, ಅವನು ತನ್ನ ತತ್ವ–ಸಿದ್ಧಾಂತ ಮತ್ತು ಆದರ್ಶಕ್ಕೆ ಎಷ್ಟು ನಿಷ್ಠೆಯನ್ನು ಪ್ರಕಟಿಸುತ್ತಾನೋ, ಅವನ ಜೀವನವೂ ಅಷ್ಟೇ ಪ್ರಾಮುಖ್ಯತೆಯನ್ನೂ, ಮಹತ್ವವನ್ನೂ ಪಡೆಯುವುದು.

ಉದಾಹರಣೆಗೆ, ನೀವು ಏನಾದರೂ ಸರಿ, ನಾನು ಲಂಚ ಸ್ವೀಕರಿಸಲಾರೆ ಎಂಬ ಒಂದು ತತ್ವವನ್ನು ಸ್ವೀಕರಿಸಿಕೊಂಡರೆ ಜನರು ಇತರ ಉತ್ತಮವಾದ, ಆಕರ್ಷಕವಾದ ಬೇರೆ ಹೆಸರನ್ನಿಟ್ಟುಕೊಂಡು (ಉಡುಗೊರೆ, ಕೊಡುಗೆ, ಕಮಿಶನ್) ನಿಮಗೆ ನೀಡಲು ಬಂದರೂ ನೀವು ಅದನ್ನು ಸ್ವೀಕರಿಸಬಾರದು.

ಪತ್ನಿಯಾದವಳು ಏನೇ ಆಗಲಿ ನಾನು ಪತಿಯೊಂದಿಗೆ ಸುಳ್ಳು ಹೇಳಲಾರೆ ಎಂಬ ಒಂದು ತತ್ವವನ್ನು ಸ್ವೀಕರಿಸಿಕೊಂಡರೆ ಜನರು ಸುಳ್ಳನ್ನು ಅದೆಷ್ಟು ಸುಂದರ ಮತ್ತು ಆಕರ್ಷಕ ಶೈಲಿಯಲ್ಲಿ ಪ್ರದರ್ಶಿಸಿದರೂ, ಇದು ಸುಳ್ಳಲ್ಲ ಪರಿಸ್ಥಿತಿಯೊಂದಿಗೆ ರಾಜಿ ಮಾಡಿಕೊಳ್ಳುವುದಕ್ಕೆ ಎನ್ನುವಂತೆಯೂ ಅವಳು ತನ್ನ ತತ್ವದಿಂದ ವ್ಯತಿಚಲಿಸದೆ ಸುಸ್ಥಿರವಾಗಿರಬೇಕಾಗಿದೆ.

ಇದೇ ರೀತಿಯಲ್ಲಿ ಪರಸ್ತ್ರೀಯರ ಸಂಗ ಮಾಡಲಾರೆ, ಮದ್ಯಪಾನ ಮಾಡಲಾರೆ, ಧೂಮಪಾನದಿಂದ ಸಂಪೂರ್ಣ ದೂರ ಇರುವೆ ಮುಂತಾದ ಪ್ರತಿಜ್ಞೆ ಮಾಡಿಕೊಂಡು ಅದಕ್ಕೆ ನಿಷ್ಠನಾಗಿ ಇರಬಹುದಾಗಿದೆ. ಸಿಗರೇಟು ಸೇದುವ ಸ್ನೇಹಿತರ ನಡುವೆ ಸಿಗರೇಟು ಸೇದದೆ ತನ್ನ ತತ್ವಕ್ಕೆ ನಿಷ್ಠನಾಗಿರಲು ಸಾಧ್ಯವಾಗಬೇಕು. ಒಂದು ತತ್ವಕ್ಕೆ ಬದ್ಧನಾಗಿರುವ ವ್ಯಕ್ತಿಯನ್ನು ಅವನ ಸ್ನೇಹಿತರು–ಸಹಪಾಠಿಗಳು ಛೇಡಿಸುವುದು ಸಹಜ. ಕೆಲವೊಮ್ಮೆ ತತ್ವದಿಂದ ಹಿಮ್ಮೆಟ್ಟುವಂತಹಾ ಪರಿಸ್ಥಿತಿ ನಿರ್ಮಿಸುವುದೂ ಇರುತ್ತದೆ. ಆದರೂ ತತ್ವಕ್ಕೆ ಅಂಟಿಕೊಳ್ಳುವ ವ್ಯಕ್ತಿಯ ಕುರಿತು ಅವನ ಆಪ್ತ ವಲಯದಲ್ಲಿ ಉತ್ತಮ ಅಭಿಪ್ರಾಯ ನಿಧಾನವಾಗಿಯಾದರೂ ರೂಪುಗೊಳ್ಳುವುದು ಖಂಡಿತ. ಸಂಕಷ್ಟಗಳು ಕಾಡುವ ಸಂದರ್ಭದಲ್ಲೆಲ್ಲಾ ಸ್ನೇಹಿತರು ಮತ್ತು ಬಂಧುಗಳು ತತ್ವ ನಿಷ್ಠರ ಬಳಿಗೇ ಬರುತ್ತಾರೆ ಮತ್ತು ಪರಿಹಾರದ ಕುರಿತು ಅಭಿಪ್ರಾಯ ಕೇಳುತ್ತಾರೆ.

ತತ್ವ ನಿಷ್ಠೆ ಎನ್ನುವುದು ಕೇವಲ ಪುರುಷರಿಗೆ ಮಾತ್ರ ಸೀಮಿತವಾದುದಲ್ಲ. ಪುರುಷರು–ಸ್ತ್ರೀಯರು ಎಲ್ಲರೂ ಇದನ್ನು ಅಳವಡಿಸಿಕೊಳ್ಳಬಹುದು. ನೀವು ನಿಮ್ಮ ತತ್ವಾದರ್ಶದಲ್ಲಿ ಬಂಡೆಯಂತೆ ಅಚಲರಾಗಿ ಬಿಟ್ಟರೆ ನಿಮ್ಮ ತತ್ವಾದರ್ಶಗಳ ಕುರಿತು ಯಾರೊಂದಿಗೂ ಯಾವುದೇ ಕಾರಣಕ್ಕೂ ರಾಜಿ ಮಾಡಿಕೊಳ್ಳದೇ ಇದ್ದರೆ ನಿಧಾನವಾಗಿಯಾದರೂ ನಿಮ್ಮನ್ನು ಗಮನಿಸುತ್ತಾರೆ ಮತ್ತು ಅಂಗೀಕರಿಸುತ್ತಾರೆ.

ಅರಬಸ್ತಾನದಲ್ಲಿ ಇಸ್ಲಾಮಿನ ಬಗ್ಗೆ ಚರ್ಚೆಗಳುಂಟಾದಾಗ ವಿಭಿನ್ನ ಕುಲಗೋತ್ರಗಳ ನಿಯೋಗಗಳು ಪ್ರವಾದಿ(ﷺ) ರನ್ನು ಭೇಟಿಯಾಗಲು ಬಂದರು. ಸಕೀಫ್ ಗೋತ್ರದ ಪರವಾಗಿ ಕೆಲವರ ನಿಯೋಗವೂ ಪ್ರವಾದಿ(ﷺ) ರವರ ಸನ್ನಿಧಿಗೆ ಬಂತು. ಪ್ರವಾದಿ(ﷺ) ಅವರಿಗೆ ಮಸೀದಿಯಲ್ಲೇ ವಾಸ್ತವ್ಯ ಕಲ್ಪಿಸಿದ್ದರು. ಅವರು ಅಲ್ಲಿ ಕುರ್‌ಆನ್ ಆಲಿಸುವಂತಾಗಲಿ ಎನ್ನುವುದು ಅವರ ಉದ್ದೇಶವಾಗಿತ್ತು. ಅವರು ಪ್ರವಾದಿ(ﷺ) ರೊಂದಿಗೆ ಬಡ್ಡಿ, ವ್ಯಭಿಚಾರ ಮತ್ತು ಮದ್ಯಪಾನಗಳ ಕುರಿತು ವಿಚಾರಿಸಿದಾಗ ಪ್ರವಾದಿ(ﷺ) ಹೇಳಿದರು. “ಅದೆಲ್ಲವೂ ನಿಷಿದ್ಧವಾಗಿದೆ.” ಅವರು ತಮ್ಮ ಪೂರ್ವಿಕರಿಂದ ವಾರೀಸಿನಲ್ಲಿ ಲಭಿಸಿದಂತಹಾ ಒಂದು ವಿಗ್ರಹವನ್ನು ಪೂಜಿಸುತ್ತಲೂ ಅದಕ್ಕೆ ಗೌರವಾದರ ಮತ್ತು ಹರಕೆಯನ್ನು ಸಲ್ಲಿಸುತ್ತಲೂ ಇದ್ದರು. ಆ

ವಿಗ್ರಹದ ಹೆಸರು 'ರಬ್ಬ' ಎಂದಾಗಿತ್ತು. ಅದಕ್ಕೆ 'ತ್ವಾಗಿಯ' ಎಂಬ ಹೆಸರೂ ಇತ್ತು. ಅವರು ಪ್ರವಾದಿ(ﷺ) ರೊಂದಿಗೆ 'ರಬ್ಬ'ದ ಕುರಿತು ವಿಚಾರಿಸಿದರು. ಅದನ್ನು ನಾವು ಏನು ಮಾಡಬೇಕು?

ಪ್ರವಾದಿ(ﷺ) ರವರು ಯಾವುದೇ ಆತಂಕ ಮತ್ತು ಸಂಕೋಚವಿಲ್ಲದೇ ಹೇಳಿದರು. "ನೀವು ಅದನ್ನು ಧ್ವಂಸ ಮಾಡಿರಿ."

ಅವರು ಹೇಳಿದರು. "ಇದು ಅಸಾಧ್ಯ. ನೀವು ಅದನ್ನು ಧ್ವಂಸಗೊಳಿಸುತ್ತೀರೆಂಬ ವಿಷಯ ರಬ್ಬಕ್ಕೆ ತಿಳಿದರೆ ಅದು ನಿಮ್ಮನ್ನೂ ನಿಮ್ಮ ಸಂತಾನಗಳನ್ನೂ ನಾಶ ಮಾಡಿ ಬಿಡುವುದು."

ಅಲ್ಲಿ ಉಪಸ್ಥಿತರಿದ್ದ ಉಮರ್(ರ) ರವರಿಗೆ ಒಂದು ವಿಗ್ರಹವನ್ನು ಕೆಡವಲು ಇಷ್ಟೊಂದು ಹೆದರುವ ಈ ಜನರನ್ನು ಕಂಡು ಆಶ್ಚರ್ಯವಾಯಿತು. ಅವರು ಹೇಳಿದರು. "ಓ ಸಕೀಫ್‌ನವರೇ! ನೀವು ಎಂತಹ ಮೌಢ್ಯದಲ್ಲಿದ್ದೀರಿ! ರಬ್ಬ ಒಂದು ಕಲ್ಲು. ಅದು ಲಾಭವೋ ನಷ್ಟವೋ ಉಂಟು ಮಾಡದು."

ಉಮರ್(ರ) ರವರ ಮಾತಿನಿಂದ ಅವರು ಆಕ್ರೋಶಗೊಂಡು ಹೇಳಿದರು. "ಓ ಖತ್ತಾಬರ ಪುತ್ರರೇ! ನಾವು ನಿಮ್ಮೊಂದಿಗೆ ಮಾತನಾಡಲು ಬಂದಿಲ್ಲ."

ನಂತರ ಉಮರ್(ರ) ಮೌನ ವಹಿಸಿದರು.

ಅವರು ಹೇಳಿದರು. "ನೀವು ಮೂರು ವರ್ಷಗಳಿಗಾಗಿ ತ್ವಾಗಿಯವನ್ನು ಇರಲು ಬಿಡಿ. ನಂತರ ಬೇಕಾದರೆ ಅದನ್ನು ಕೆಡವಿ ಹಾಕೋಣ."

ಅವರು ಅಲ್ಲಾಹನ ಸಂದೇಶವಾಹಕರೊಂದಿಗೆ(ﷺ) ಇಸ್ಲಾಮಿನ ಮೂಲತತ್ವಕ್ಕೆ ವಿರುದ್ಧವಾದ ಮೂರ್ತಿಪೂಜೆಯ ಕುರಿತು ಸಮಜಾಯಿಸುತ್ತಿದ್ದಾರೆ ಎನ್ನುವುದನ್ನು ಅರ್ಥಮಾಡಿಕೊಂಡ ಪ್ರವಾದಿ(ﷺ) ಹೇಳಿದರು. "ಇಲ್ಲ! ಸಾಧ್ಯವಿಲ್ಲ."

ಅವರು ಹೇಳಿದರು. "ಎರಡು ವರ್ಷ ಕಾಲಾವಕಾಶ ಕೊಡಿ."

ಪ್ರವಾದಿ(ﷺ). "ಸಾಧ್ಯವಿಲ್ಲ."

"ಸರಿ. ಒಂದು ವರ್ಷವಾದರೂ..."

"ಇಲ್ಲ, ಸಾಧ್ಯವೇ ಇಲ್ಲ." ಪ್ರವಾದಿ(ﷺ) ರವರು ಖಡಾಖಂಡಿತವಾಗಿ ಹೇಳಿದರು.

"ಒಂದು ತಿಂಗಳ ಮಟ್ಟಿಗಾದರೂ ಅವಕಾಶ ಕೊಡಿ."

"ಸಾಧ್ಯವೇ ಇಲ್ಲ." ಪ್ರವಾದಿಯವರು(ﷺ) ಹೇಳಿದರು.

ಪ್ರವಾದಿ(ﷺ) ರವರು ಆ ವಿಷಯವನ್ನು ಯಾವುದೇ ಚರ್ಚೆ–ಮಾತುಕತೆಗೆ ಅವಕಾಶವನ್ನೇ ಕಲ್ಪಿಸದೆ ಒಂದೇ ಮಾತಿನಲ್ಲಿ ಅಚಲರಾಗಿರುವುದನ್ನು ಕಂಡು ಅವರು, "ಇದು ತೌಹೀದಿನ ವಿಚಾರ, ಇದರಲ್ಲಿ ಯಾವುದೇ ರೀತಿಯ ಮೃದು ಧೋರಣೆ ಸಾಧ್ಯವಿಲ್ಲ" ಎನ್ನುವುದನ್ನು ಮನವರಿಕೆ ಮಾಡಿಕೊಂಡರು.

ಕೊನೆಗೆ ಅವರು ಹೇಳಿದರು. "ಓ ಅಲ್ಲಾಹನ ಸಂದೇಶವಾಹಕರೇ! ಹಾಗಾದರೆ ತಾವೇ ಅದನ್ನು ಧ್ವಂಸ ಮಾಡಿರಿ. ನಾವಂತೂ ಅದರ ಮೇಲೆ ನಮ್ಮ ಕೈ ತಗಲಿಸಲಾರೆವು."

ಪ್ರವಾದಿ(ﷺ) ಹೇಳಿದರು. "ಸರಿ! ನಾನು ನಿಮ್ಮ ಕಡೆಗೆ ಕೆಲವು ಜನರನ್ನು ಕಳುಹಿಸುತ್ತೇನೆ. ಅವರು ಅದನ್ನು ಧ್ವಂಸ ಮಾಡುವರು."

ಬಳಿಕ ಅವರು ಹೇಳಿದರು. "ನಾವು ನಮಾಝ್ ನಿರ್ವಹಿಸಲು ಬಯಸುವುದಿಲ್ಲ. ಅದು ನಮಗೆ ಇಷ್ಟವಿಲ್ಲ."

ಪ್ರವಾದಿ(ﷺ) ಹೇಳಿದರು. "ನಿಮ್ಮ ಕೈಯಿಂದಲೇ ನೀವು ಪೂಜಿಸುತ್ತಿದ್ದ ವಿಗ್ರಹವನ್ನು ಕೆಡಹುವಂತೆ ನಾವೇನೂ ನಿಮ್ಮನ್ನು ಬಲವಂತಪಡಿಸಲಿಲ್ಲ. ಆದರೆ ನಮಾಝ್ ನಿರ್ವಹಿಸದಿರುವವರು ಯಾರೂ ಇಸ್ಲಾಮಿನಲ್ಲಿ ನಮ್ಮ ಸಹೋದರರಾಗಿರಲು ಸಾಧ್ಯವಿಲ್ಲ."

ಹಾಗೆ ಆ ನಿಯೋಗದವರು ಈ ಷರತ್ತುಗಳ ಮೇಲೆ ಪ್ರವಾದಿ(ﷺ) ರೊಂದಿಗೆ ಕರಾರು ಮಾಡಿಕೊಂಡು ಅವರ ಗೋತ್ರದ ಕಡೆಗೆ ಮರಳಿದರು. ಅಲ್ಲಿ ಜನರಿಗೆ ಇಸ್ಲಾಮಿನ ಸಂದೇಶ ನೀಡಿದಾಗ ಜನರೆಲ್ಲರೂ ಆತ್ಮಾರ್ಥವಾಗಿ ಇಸ್ಲಾಮ್ ಸ್ವೀಕರಿಸಿದರು.

ಬಳಿಕ ಕೆಲವು ದಿನಗಳ ನಂತರ ಕೆಲವು ಸಹಾಬಿಗಳು ವಿಗ್ರಹವನ್ನು ಕೆಡವಿ ಹಾಕಲು ಸಕೀಫ್‌ಗೆ ಹೋದರು. ಅವರಲ್ಲಿ ಖಾಲಿದ್ ಬಿನ್ ವಲೀದ್(ರ) ಮತ್ತು ಮುಗೀರ ಬಿನ್ ಶುಅ್‌ಬ(ರ) ರವರೂ ಇದ್ದರು. ಸಹಾಬಿಗಳು ವಿಗ್ರಹದ ಕಡೆಗೆ ಹೋದಾಗ ಆ ಜನರು ಗಾಬರಿಗೊಂಡರು. ಅವರ ಪೈಕಿ ಪುರುಷರು, ಸ್ತ್ರೀಯರು ಮತ್ತು ಮಕ್ಕಳು ಎಲ್ಲರೂ ಮನೆಯಿಂದ ಹೊರಟು ಅಲ್ಲಿಗೆ ಬಂದು ತಮಾಷೆ ನೋಡುವಂತೆ ನೆರೆದು ಬಿಟ್ಟರು. ಅವರು ವಿಗ್ರಹವು ಖಂಡಿತ ಧ್ವಂಸವಾಗುವುದಿಲ್ಲ ಎಂದು ಬಾವಿಸಿದ್ದರು. ಮಾತ್ರವಲ್ಲದೆ, ಅದು

ಪ್ರತೀಕಾರವೆಸಗುವುದೆಂಬ ನಂಬಿಕೆ ಅವರಲ್ಲಿತ್ತು. ಮುಗೀರ ಬಿನ್ ಶುಅ್‌ಬ(ﷺ) ಕೈಯಲ್ಲಿ ಕೊಡಲಿಯನ್ನು ಹಿಡಿದುಕೊಂಡು ತನ್ನ ಸಂಗಡಿಗರೊಂದಿಗೆ ಹೇಳಿದರು. "ನೀವು ನೋಡುತ್ತಾ ಇರಿ. ಈಗ ನಾನು ಏನು ಮಾಡುತ್ತೇನೆಂದು. ನಿಮಗೆ ಸಕೀಫ್ ಜನರ ಕುರಿತು ನಗು ಬರಬಹುದು." ಹೀಗೆ ಹೇಳುತ್ತಾ ಅವರು ವಿಗ್ರಹದ ಬಳಿಗೆ ಬಂದರು. ಅದರ ಮೇಲೆ ಕೊಡಲಿಯಿಂದ ಬಲವಾಗಿ ಬೀಸಿದರು ಮತ್ತು ನೆಲದ ಮೇಲೆ ದೊಪ್ಪನೆ ಬಿದ್ದುಬಿಟ್ಟರು. ನಂತರ ಕೈ–ಕಾಲು ಬಡಿಯಲು ಆರಂಭಿಸಿದರು. ಸಕೀಫ್‌ನವರು ಈ ದೃಶ್ಯವನ್ನು ಕಂಡು ಹೌಹಾರಿದರು. "ಅಲ್ಲಾಹು ಮುಗೀರರನ್ನು ದೂರ ಮಾಡಲಿ. ಅವರನ್ನು ರಬ್ಬ ಕೊಂದುಹಾಕಿತು" ಎಂದು ಕೇಕೆ ಹಾಕಿ ನಗತೊಡಗಿದರು. ಬಳಿಕ ಸಹಾಬಾಗಳೊಂದಿಗೆ ಹೇಳಿದರು. "ಈಗ ಇನ್ನು ನಿಮ್ಮ ಪೈಕಿ ಯಾರು ಮುಂದೆ ಬರುತ್ತೀರಿ?" ತಕ್ಷಣ ಮುಗೀರ ಎದ್ದು ನಿಂತು ನಗುತ್ತಾ ಹೇಳಿದರು. "ಸಕೀಫ್‌ನವರೇ! ನಾನು ತಮಾಷೆಗಾಗಿ ಹಾಗೆ ಮಾಡಿದೆ. ಇದು ಒಂದು ವಿಗ್ರಹವಾಗಿದೆ. ಕೇವಲ ಕಲ್ಲಿನಿಂದ ನಿರ್ಮಿಸಲಾದ ವಿಗ್ರಹ. ಇದಕ್ಕೆ ಯಾವ ಶಕ್ತಿ–ಸಾಮರ್ಥ್ಯವೂ ಇಲ್ಲ. ಆದ್ದರಿಂದ ಸರ್ವ ಶಕ್ತಿ–ಸಾಮರ್ಥ್ಯಗಳೂ ಇರುವ ಅಲ್ಲಾಹುವನ್ನು ಮಾತ್ರ ಆರಾಧಿಸಿರಿ."

ಬಳಿಕ ಅವರು ಮುಂದುವರಿದು ವಿಗ್ರಹವನ್ನು ಸಂಪೂರ್ಣ ಧ್ವಂಸ ಮಾಡಿದರು. ಈ ಜನರೂ ಆ ಕಾರ್ಯದಲ್ಲಿ ಅವರೊಂದಿಗೆ ಕೈ ಜೋಡಿಸಿದರು. ಅವರು ಅದನ್ನು ಸಂಪೂರ್ಣ ಕೆಡವಿ ನೆಲಸಮ ಮಾಡಿದರು. (ಬೈಹಕಿ 5/299–306, ಅಲ್‌ಬಿದಾಯ ವನ್ನಿಹಾಯ 5/27–30)

**ಉಪಸಂಹಾರ:**

«مَنْ طَلَبَ رِضَا النَّاسِ بِسَخَطِ اللَّهِ سَخِطَ اللَّهُ عَلَيْهِ وَأَسْخَطَ عَلَيْهِ النَّاسَ. وَمَنْ طَلَبَ رِضَا اللَّهِ بِسَخَطِ النَّاسِ رَضِيَ اللَّهُ عَنْهُ وَأَرْضَى عَنْهُ النَّاسُ».

"ಯಾರು ಅಲ್ಲಾಹನ ಇಷ್ಟಕ್ಕೆ ಬದಲಾಗಿ ಜನರ ಇಷ್ಟವನ್ನು ಬಯಸುತ್ತಾರೋ ಅಲ್ಲಾಹು ಅವನ ಬಗ್ಗೆ ಬೇಸರಪಡುವನು. ಮತ್ತು ಜನರೂ ಅವನಿಂದ ಅಸಂತೃಪ್ತರಾಗುವಂತೆ ಮಾಡುವನು. ಇನ್ನು ಯಾರು ಜನರ ಇಷ್ಟಕ್ಕೆ ವಿರುದ್ಧವಾಗಿ ಅಲ್ಲಾಹನ ಸಂತೃಪ್ತಿಯನ್ನು ಬಯಸುತ್ತಾರೋ ಅಲ್ಲಾಹು ಅವರಿಂದ ಸಂತೃಪ್ತನಾಗುವನು. ಮಾತ್ರವಲ್ಲ, ಜನರೂ ಅವನಿಂದ ಸಂತೃಪ್ತರಾಗುವಂತೆ ಮಾಡುವನು." (ಜಾಮಿಉ ತಿರ್ಮಿದಿ 2414) ■

*26 ನೇ ಪುಟದಿಂದ*

## ... ಅಗ್ರಪ್ರಾಶಸ್ತ್ಯ ನೀಡಬೇಕು

ಮಾರಾಟ ಮಾಡುವ ವ್ಯಕ್ತಿ ಅವುಗಳನ್ನು ತನ್ನ ಮನೆಯಲ್ಲಿ ಕಟ್ಟಿ ಹಾಕುತ್ತಾನೆ. ಅದರ ಹಟ್ಟಿಯು ನೆರೆಯವನ ಗೋಡೆಯ ಬಳಿಯಲ್ಲಿರುತ್ತದೆ. ಈ ಹಟ್ಟಿಯಿಂದಾಗಿ, ಅಂದರೆ ಜಾನುವಾರುಗಳ ಅರಚಾಟ, ವಾಸನೆ ಮುಂತಾದವುಗಳಿಂದ ನೆರೆಯವನಿಗೆ ತೊಂದರೆಯಾಗುವುದಾದರೆ ಅವನು ಅದನ್ನು ವಿರೋಧಿಸಬಹುದು.

ಆಗ ಆತನ ವಿರೋಧವನ್ನು ಲೆಕ್ಕಿಸದೆ ಈ ಮನೆ, ಅಂಗಳ ನನ್ನ ಆಸ್ತಿ. ಇದರಲ್ಲಿ ನಾನು ನನಗೆ ತೋಚಿದಂತೆ ವರ್ತಿಸುತ್ತೇನೆ ಎಂದು ಹೇಳುವುದು ಇಸ್ಲಾಮೀ ಶಾಸನದ (ಶರೀಅತ್ತಿನ) ಪ್ರಕಾರ ಸಾಧ್ಯವಿಲ್ಲ.

ಏಕೆಂದರೆ ಜಾನುವಾರುಗಳ ಸಾಕಣೆಯು ಆ ವ್ಯಕ್ತಿಗೆ ಸಂಬಂಧಿಸಿದಂತೆ ಹಿತವನ್ನುಂಟು ಮಾಡುವ ಕಾರ್ಯವಾಗಿದೆ. ಆದರೆ ಆತನ ನೆರೆಯವನಿಗೆ ಸಂಬಂಧಿಸಿದಂತೆ ಅದು ಹಾನಿಯನ್ನುಂಟು ಮಾಡುವ ಕಾರ್ಯವಾಗಿದೆ. ಇಸ್ಲಾಮೀ ಶಾಸನದ ಪ್ರಕಾರ ಹಿತವನ್ನು ತರುವುದಕ್ಕಿಂತಲೂ ಹಾನಿಯನ್ನು ತಡೆಗಟ್ಟಲು ಅಗ್ರಪ್ರಾಶಸ್ತ್ಯ ನೀಡಬೇಕು.

ಇನ್ನೊಂದು ಉದಾಹರಣೆ:

ಮದ್ಯ, ಅಮಲು ಪದಾರ್ಥ ಮುಂತಾದವುಗಳ ವ್ಯಾಪಾರವನ್ನು ವಿರೋಧಿಸಬೇಕಾಗಿದೆ. ಏಕೆಂದರೆ ಈ ವ್ಯಾಪಾರದಲ್ಲಿ ವ್ಯಾಪಾರಿಗಳಿಗೆ ಪ್ರಯೋಜನ ಮತ್ತು ಲಾಭಗಳಿವೆ. ಆದರೆ ಇನ್ನೊಂದು ಕಡೆಯಿಂದ ನೋಡುವುದಾದರೆ ಇದರಲ್ಲಿ ಪ್ರಯೋಜನಕ್ಕಿಂತಲೂ ಹೆಚ್ಚು ಹಾನಿಗಳಿವೆ. ಆದ್ದರಿಂದ ಅವುಗಳ ವ್ಯಾಪಾರ ನಿಷಿದ್ಧವಾಗಿದೆ. ಇದು ಹಿತವನ್ನು ತರುವುದಕ್ಕಿಂತಲೂ ಹಾನಿಯನ್ನು ತಡೆಗಟ್ಟಲು ಅಗ್ರಪ್ರಾಶಸ್ತ್ಯ ನೀಡಬೇಕು ಎಂಬ ತತ್ವದಲ್ಲಿ ಸೇರುತ್ತದೆ. ■

# ಕುರ್‌ಆನಿನ ಉಪಮೆಗಳು

ಸತ್ಯವಿಶ್ವಾಸಿಗಳನ್ನು ಅವರ ವಿಶ್ವಾಸದಿಂದ ವಿಮುಖಗೊಳಿಸಿ ಬಹುದೇವವಿಶ್ವಾಸ ಹಾಗೂ ಅರಾಜಕತೆಯೆಡೆಗೆ ಕೊಂಡೊಯ್ಯುವ ಕೆಲವು ವ್ಯಕ್ತಿಗಳ ಕಾರ್ಯಾಚರಣೆಯನ್ನು ಇಲ್ಲಿ ಕುರ್‌ಆನ್ ಕೆಲವು ಪ್ರಶ್ನೆಗಳ ಮೂಲಕ ಪರಾಜಿತಗೊಳಿಸುತ್ತದೆ. ಅಲ್ಲಾಹನು ದಯಪಾಲಿಸಿದ ಹಿದಾಯತ್ತಿನಲ್ಲಿ ಸಂಪೂರ್ಣ ಸಂತೃಪ್ತಿ ಮತ್ತು ಶಾಂತಿಯನ್ನು ಪಡೆದಿರುವ ನಮ್ಮನ್ನು ನೀವು ಉಪಕಾರವಾಗಲಿ ಹಾನಿಯಾಗಲಿ ಮಾಡುವ ಸಾಮರ್ಥ್ಯವಿಲ್ಲದ ಶಕ್ತಿ ಹಾಗೂ ವ್ಯಕ್ತಿಗಳನ್ನು ಆರಾಧಿಸಲು ಆಹ್ವಾನಿಸುತ್ತಿರುವಿರಾ? ನಾವು ಈ ಮಾರ್ಗವನ್ನು ತೊರೆದರೆ ಮರುಭೂಮಿಯಲ್ಲಿ ದಾರಿತಪ್ಪಿ ಆಯಾಸದಿಂದ ಗೊತ್ತುಗುರಿಯಿಲ್ಲದೆ ಭಯದಿಂದ ಅಲೆದಾಡುತ್ತಿರುವವನ ಪರಿಸ್ಥಿತಿ ನಮ್ಮದಾಗಬಹುದು.

ಪವಿತ್ರ ಕುರ್‌ಆನ್ ಹಲವಾರು ಉಪಮೆಗಳ ಮೂಲಕ ವಿಷಯವನ್ನು ಮತ್ತು ಅದರ ಗಂಭೀರತೆಯನ್ನು ಮನವರಿಕೆ ಮಾಡಿಕೊಡುತ್ತದೆ. ಈ ಉಪಮೆಗಳು ಜನರ ಚಿಂತನೆಯನ್ನು ಬಡಿದೆಬ್ಬಿಸಿ ವಿಷಯದ ಆಳಕ್ಕೆ ಪ್ರವೇಶಿಸುವಂತೆ ಮಾಡುತ್ತದೆ. ಅಂತಹ ಕೆಲವು ಉಪಮೆಗಳ ಕುರಿತು ಪರಿಶೀಲಿಸೋಣ.

﴿ٱلَّذِينَ يَأۡكُلُونَ ٱلرِّبَوٰاْ لَا يَقُومُونَ إِلَّا كَمَا
يَقُومُ ٱلَّذِي يَتَخَبَّطُهُ ٱلشَّيۡطَٰنُ مِنَ ٱلۡمَسِّۚ ذَٰلِكَ
بِأَنَّهُمۡ قَالُوٓاْ إِنَّمَا ٱلۡبَيۡعُ مِثۡلُ ٱلرِّبَوٰاْۗ وَأَحَلَّ ٱللَّهُ ٱلۡبَيۡعَ
وَحَرَّمَ ٱلرِّبَوٰاْۚ فَمَن جَآءَهُۥ مَوۡعِظَةٞ مِّن رَّبِّهِۦ فَٱنتَهَىٰ فَلَهُۥ
مَا سَلَفَ وَأَمۡرُهُۥٓ إِلَى ٱللَّهِۖ وَمَنۡ عَادَ فَأُوْلَٰٓئِكَ
أَصۡحَٰبُ ٱلنَّارِۖ هُمۡ فِيهَا خَٰلِدُونَ ٢٧٥﴾

“ಬಡ್ಡಿ ತಿನ್ನುವವನು ಶೈತಾನನ ಸೋಂಕಿನಿಂದ ಕುಸಿದುಬಿದ್ದು ಎದ್ದೇಳುವವನ ಹಾಗೆ ವಿನಾ ಎದ್ದೇಳುವುದಿಲ್ಲ. ಹಾಗಾಗುವುದು ವ್ಯಾಪಾರವು ಬಡ್ಡಿಯಂತೆಯೇ ಎಂದು ಅವರು ಹೇಳಿದ ಕಾರಣದಿಂದಾಗಿದೆ. ಆದರೆ ಅಲ್ಲಾಹನು ವ್ಯಾಪಾರವನ್ನು ಧರ್ಮ-ಬದ್ಧಗೊಳಿಸಿದ್ದಾನೆ ಮತ್ತು ಬಡ್ಡಿಯನ್ನು ನಿಷಿದ್ಧಗೊಳಿಸಿದ್ದಾನೆ. ಆದುದರಿಂದ ಯಾರು ತನ್ನ ಪ್ರಭುವಿನ ಉಪದೇಶವು ಬಂದ ಮೇಲೆ ಬಡ್ಡಿಯಿಂದ ಹಿಂದೆ ಸರಿದನೋ ಅವನು ಮುಂಚೆ ಪಡೆದದ್ದು ಅವನಿಗಿದೆ. ಮತ್ತು ಅವನ ವಿಷಯವು ಅಲ್ಲಾಹನ ಕಡೆಗಾಗಿದೆ. ಮತ್ತು ಯಾರು ಪುನರಾವರ್ತಿಸಿದರೋ ಅವರು ನರಕದವರಾಗಿ-ದ್ದಾರೆ. ಅದರಲ್ಲಿ ಅವರು ಶಾಶ್ವತ ವಾಸಿಗಳಾಗುವರು.” (2:275)

ಪವಿತ್ರ ಕುರ್‌ಆನ್ ಇಲ್ಲಿ ಬಡ್ಡಿ ಎಂಬ ಮಹಾಪಾಪದ ಗಂಭೀರತೆ ಮತ್ತು ಅದಕ್ಕಿರುವ ಶಿಕ್ಷೆಯನ್ನು ವಿವರಿಸುತ್ತದೆ. ಬಡ್ಡಿ ತಿನ್ನುವವ-ನಿಗೆ ಪುನರುತ್ಥಾನ ದಿನದಂದು ತಮ್ಮ ಕಬರ್‌ಗಳಿಂದ ಸರಿಯಾಗಿ ಎದ್ದು ಬರಲೂ ಸಾಧ್ಯವಾಗದು. ಅವರು ಅತ್ಯಂತ ಮಾನಸಿಕ ಉದ್ವೇಗಕ್ಕೊಳಗಾಗಿ ಹುಚ್ಚ ಅಥವಾ ಮನೋರೋಗಿಯಂತೆ ಓಲಾಡಿಕೊಂಡು ಬರುವರು.

ಬಡ್ಡಿಯ ಜನರು ಇಹಲೋಕದಲ್ಲಿ ಅತ್ಯಧಿಕ ದುಃಖ ಮತ್ತು ಮಾನಸಿಕ ಒತ್ತಡದಲ್ಲಿರುವರು. ಅವರನ್ನು ಅರಾಜಕತೆ ಮತ್ತು ಅಶಾಂತಿ ಆವರಿ-ಸಿಕೊಳ್ಳುವುದು. ಅವರಲ್ಲಿ ಧರ್ಮಾಧರ್ಮ, ಮಾನವೀಯತೆ ಮತ್ತು ಮೃಗೀಯತೆಯ ನಡುವಿನ ಅಂತರವು ಕಡಿಮೆಯಾಗಿ ಅವರ

ಮುಂದೆ ಒಂದು ಭ್ರಮೆಯ ಲೋಕವು ಅನಾವರಣಗೊಳ್ಳುತ್ತದೆ.

ಶೈತಾನನು ಒಂದು ಅದೃಶ್ಯ ಅಸ್ತಿತ್ವವಾಗಿದ್ದಾನೆ. ಅವನು ಮನುಷ್ಯನನ್ನು ಸನ್ಮಾರ್ಗದಿಂದ ಪಥಭ್ರಷ್ಟಗೊಳಿಸುವ ಕೆಲಸವನ್ನು ನಿರ್ವಹಿಸುತ್ತಾನೆ. ಅವನು ತನ್ನ ದುರ್ಮಂತ್ರಗಳ ಮೂಲಕ ಕಾರ್ಯ ಸಾಧಿಸುತ್ತಾನೆ. ಆದರೆ ಒಬ್ಬನಲ್ಲಿ ಬಲವಂತವಾಗಿ ಪ್ರವೇಶಿಸುವ ಶಕ್ತಿ ಅವನಿಗಿಲ್ಲ.

﴿ إِنَّ عِبَادِى لَيْسَ لَكَ عَلَيْهِمْ سُلْطَٰنٌ ﴾

“ನನ್ನ ನೈಜ ದಾಸರ ಮೇಲೆ ನಿನಗೆ ಯಾವುದೇ ಅಧಿಕಾರವಿಲ್ಲ.” (17:65)

ಆದರೆ ಜನರನ್ನು ದಾರಿತಪ್ಪಿಸುವ ತಂತ್ರಗಳನ್ನು ಹೂಡಲು ಅಲ್ಲಾಹನು ಅವನಿಗೆ ಅನುಮತಿ ನೀಡಿದ್ದಾನೆ.

﴿ وَٱسْتَفْزِزْ مَنِ ٱسْتَطَعْتَ مِنْهُم بِصَوْتِكَ
وَأَجْلِبْ عَلَيْهِم بِخَيْلِكَ وَرَجِلِكَ وَشَارِكْهُمْ
فِى ٱلْأَمْوَٰلِ وَٱلْأَوْلَٰدِ وَعِدْهُمْ ۚ وَمَا
يَعِدُهُمُ ٱلشَّيْطَٰنُ إِلَّا غُرُورًا ﴿٦٤﴾ ﴾

“ನೀನು ಇಲ್ಲಿಂದ ಹೊರಡು ಅವರಲ್ಲಿ ಯಾರಾದರೂ ನಿನ್ನನ್ನು ಅನುಸರಿಸಿದರೆ ನಿಮ್ಮೆಲ್ಲರ ವಾಸಸ್ಥಳ ನರಕವಾಗಿದೆ. ನಿನ್ನ ಉಪದೇಶದಿಂದ ಯಾರನ್ನೆಲ್ಲ ಪುಸಲಾಯಿಸಲು ಸಾಧ್ಯವಿದೆಯೋ ಅವರನ್ನೆಲ್ಲ ಪುಸಲಾಯಿಸು. ಅವರ ವಿರುದ್ಧ ನಿನ್ನ ಅಶ್ವಸೇನೆಯನ್ನು, ಕಾಲಾಳು ಪಡೆಯನ್ನು ಕರೆದು ತಾ. ಸಂಪತ್ತು ಹಾಗೂ ಸಂತತಿಗಳಲ್ಲಿ ಅವರೊಂದಿಗೆ ಭಾಗಿಯಾಗು. ಮತ್ತು ಅವರೊಡನೆ ವಾಗ್ದಾನ ಮಾಡು. ಶೈತಾನನು ವಂಚನೆಯ ವಿನಾ ಇನ್ನಾವ ವಾಗ್ದಾನವನ್ನೂ ಮಾಡುವುದಿಲ್ಲ.” (17:64)

## ಕರ್ಮದ ನಷ್ಟ ಮತ್ತು ಕೃಷಿನಾಶ

﴿ أَيَوَدُّ أَحَدُكُمْ أَن تَكُونَ لَهُۥ جَنَّةٌ مِّن نَّخِيلٍ
وَأَعْنَابٍ تَجْرِى مِن تَحْتِهَا ٱلْأَنْهَٰرُ لَهُۥ فِيهَا مِن كُلِّ
ٱلثَّمَرَٰتِ وَأَصَابَهُ ٱلْكِبَرُ وَلَهُۥ ذُرِّيَّةٌ ضُعَفَآءُ فَأَصَابَهَآ
إِعْصَارٌ فِيهِ نَارٌ فَٱحْتَرَقَتْ ۗ كَذَٰلِكَ يُبَيِّنُ ٱللَّهُ
لَكُمُ ٱلْءَايَٰتِ لَعَلَّكُمْ تَتَفَكَّرُونَ ﴿٢٦٦﴾ ﴾

“ನಿಮ್ಮಲ್ಲೊಬ್ಬನಿಗೆ ತಳಭಾಗದಿಂದ ಕಾಲುವೆಗಳು ಹರಿಯುತ್ತಿರುವ ಖರ್ಜೂರ, ದ್ರಾಕ್ಷಿ ಮತ್ತು ನಾನಾ ವಿಧದ ಫಲಗಳಿಂದ ತುಂಬಿದ ಒಂದು ತೋಟವಿದ್ದು ಅವನು ಸ್ವತಃ ವೃದ್ಧನಾಗಿ ಅವನ ಎಳೆ ಹರೆಯದ ಮಕ್ಕಳು ದುರ್ಬಲರಾಗಿದ್ದ ಸ್ಥಿತಿಯಲ್ಲಿ ಆ ತೋಟವು ಅಗ್ನಿ ಮಾರುತವೊಂದಕ್ಕೆ ಸಿಲುಕಿ ಸುಟ್ಟು ಹೋಗುವುದನ್ನು ಅವನು ಇಷ್ಟಪಡುವನೋ? ಹೀಗೆ ನೀವು ಚಿಂತಿಸುವುದಕ್ಕಾಗಿ ಅಲ್ಲಾಹನು ನಿಮ್ಮ ಮುಂದೆ ದೃಷ್ಟಾಂತಗಳನ್ನು ವಿವರಿಸುತ್ತಾನೆ.” (2:266)

ಮನುಷ್ಯನು ಮಾಡುವ ಸತ್ಕರ್ಮಗಳ ಫಲವನ್ನು ಅನುಭವಿಸಬೇಕಾದ ಸಮಯದಲ್ಲಿ ಅದು ಅವನಿಂದ ಸಾಧ್ಯವಾಗದಿದ್ದರೆ ಅವನ ಪರಿಸ್ಥಿತಿ ಏನಾಗಬಹುದು? ಅಲ್ಲಾಹು ಇಲ್ಲಿ ಇಂತಹ ಒಂದು ದಯನೀಯ ಅವಸ್ಥೆಯನ್ನು ಉಪಮೆಯ ಮೂಲಕ ವಿವರಿಸುತ್ತಾನೆ. ದಾನಧರ್ಮ ಮತ್ತಿತರ ಆರಾಧನಾಕರ್ಮಗಳಲ್ಲಿ ಆತ್ಮಾರ್ಥತೆಗೆ ಬದಲಾಗಿ ಕೇವಲ ಪ್ರದರ್ಶನ ಪ್ರಿಯತೆ ಬಂದರೆ, ಉದ್ದೇಶವನ್ನು ಮಾರಿ ಲೌಕಿಕ ಸ್ವಾರ್ಥಗಳು ನುಸುಳಿದರೆ, ಉಪಕಾರ ಪಡೆದವರ ಹೆಸರನ್ನು ಹೇಳಿ ಕಿರುಕುಳ ಕೊಟ್ಟರೆ ಮಾಡಿದ ಎಲ್ಲಾ ಸತ್ಕರ್ಮಗಳು ನಿಷ್ಫಲವಾಗುತ್ತದೆಯೆಂದು ಅಲ್ಲಾಹನು ಇಲ್ಲಿ ಸ್ಪಷ್ಟಪಡಿಸುತ್ತಾನೆ.

ವೃದ್ಧಾಪ್ಯದಲ್ಲಿ ತನ್ನ ಎಲ್ಲಾ ಸಂಪತ್ತುಗಳು ನಾಶವಾದರೆ, ಅದನ್ನು ಮರಳಿ ಪಡೆಯಲು ಅವನ ಆರೋಗ್ಯವು ಸಹಕರಿಸುವುದಿಲ್ಲ. ಹಾಗೆಯೇ ಸತ್ಕರ್ಮಗಳ ಫಲಗಳು ಅನುಭವಿಸಬೇಕಾದಂತಹ ಕಾಲದಲ್ಲಿ ಅದು ನಿಷ್ಫಲವಾಗುತ್ತದೆಯೆಂದು ತಿಳಿದಾಗ ಅದನ್ನು ಬಗೆಹರಿಸಲು ಅಥವಾ ಬೇರೆ ಪರ್ಯಾಯ ಮಾರ್ಗಗಳನ್ನು ಹುಡುಕಲು ಅಸಾಧ್ಯವಾದಂತಹ ಪರಿಸ್ಥಿತಿ ನಿರ್ಮಾಣವಾಗುತ್ತದೆ.

ದಾನಧರ್ಮಗಳನ್ನು ಮಾಡಿದ ನಂತರ ಅದರ ಕುರಿತು ಡಂಗುರ ಸಾರಿ ದಾನ ಸ್ವೀಕರಿಸಿದವರಿಗೆ ತೊಂದರೆಯಾಗುವಂತೆ ಮಾಡುವವರು ಅವರ ಕೈಗಳಿಂದ ಬೆಂಕಿಯ ಬಿರುಗಾಳಿಯನ್ನು ಸಜ್ಜುಗೊಳಿಸುತ್ತಾರೆ. ನಾಳೆ ಸ್ವಂತ ಕರ್ಮಫಲಗಳು ಅತ್ಯಾವಶ್ಯಕವಾಗಿ ಬೇಕಾಗುವ ನಿರ್ಣಾಯಕ ಸಮಯದಲ್ಲಿ, ನೀವು ಸಜ್ಜುಗೊಳಿಸಿಟ್ಟ ಆ ಬೆಂಕಿಯ ಬಿರುಗಾಳಿ ನಿಮ್ಮ ದಾನಧರ್ಮಗಳ ಮೇಲೆ ಅಪ್ಪಳಿಸಿ ಅವೆಲ್ಲವನ್ನೂ ಸುಟ್ಟು ಬೂದಿ ಮಾಡುವುದು. ಅಲ್ಲಾಹನು ಈ ಉಪಮೆಯ ಮೂಲಕ ಸ್ವಂತ ಕರ್ಮಫಲಗಳು ವ್ಯರ್ಥವಾಗುವುದರ

ಕುರಿತು ಕೆಲವೊಂದು ಪೂರ್ವಸಿದ್ಧತೆಗಳನ್ನು ಮಾಡಿಕೊಳ್ಳಬೇಕೆಂದು ಸೂಚಿಸಿದ್ದಾನೆ.

ಬಹಳ ಕಷ್ಟಪಟ್ಟು ಬೆಳೆಸಿದ ಹಣ್ಣುಹಂಪಲು ಮತ್ತು ತರಕಾರಿಗಳ ತೋಟವು ನೀವು ಮತ್ತು ನಿಮ್ಮ ಕುಟುಂಬದ ಜೀವನಾಧಾರದ ಏಕೈಕ ಮೂಲವಾಗಿರುವಾಗ ಅವೆಲ್ಲವೂ ನಾಶವಾಗುವುದು ನಿಮಗೆಷ್ಟು ದುಃಖದ ಸಂಗತಿ. ಮಾಡಿದ ಕಾರ್ಯಗಳನ್ನು ಉತ್ತಮಪಡಿಸಲು ಹಾಗೂ ಹೊಸದಾಗಿ ಸತ್ಕರ್ಮಗಳನ್ನು ಮಾಡಲಾಗದ ಪರಲೋಕವನ್ನು ಎದುರುಗೊಳ್ಳಬೇಕಾದಂತಹ ಅಸಹಾಯಕ ಸನ್ನಿವೇಶವನ್ನು ಇಲ್ಲಿ ದುರ್ಬಲಾವಸ್ಥೆಯಲ್ಲಿರುವ ಎಳೆ ಮಕ್ಕಳ ಉಪಮೆ ಮೂಲಕ ಸೂಚಿಸಲಾಗಿದೆ.

ಒಬ್ಬನು ಇಹಲೋಕದಲ್ಲಿ ಅಲ್ಲಾಹು ಮತ್ತು ಅವನ ಸೃಷ್ಟಿಗಳೊಂದಿಗೆ ಮಾಡಿದ ತಪ್ಪುಗಳು ಅವನು ಇಲ್ಲಿ ಮಾಡಿದ ದಾನಧರ್ಮಗಳನ್ನು ಹಾಗೂ ಮತ್ತಿತರ ಸತ್ಕರ್ಮಗಳ ಕಾರಣದಿಂದ ಕ್ಷಮಿಸಲ್ಪಡುತ್ತದೆ. ಪ್ರಾಯಶಃ ಎಳೆ ಮಕ್ಕಳ ಉಪಮೆಯನ್ನು ಇಂತಹ ತಪ್ಪುಗಳಿಗೆ ಅನ್ವಯಿಸಿರಬಹುದು. ಸ್ವಂತ ಕರ್ಮಗಳು ನಿಷ್ಫಲವಾದಾಗ ಅವಶ್ಯಕತೆಯ ಸಂದರ್ಭ ಉಪಯೋಗಿಸಲಾಗದ ಸಂದರ್ಭ ಬಂದಾಗ ಓರ್ವ ವೃದ್ಧನಿಗೆ ಎಳೆ ಮಕ್ಕಳು ಭರವಸೆಯಾಗುವುದರ ಬದಲು ಒಂದು ಭಾರ ಮತ್ತು ಬಾಧ್ಯತೆಯಾಗಿ ಮಾರ್ಪಡುವಂತೆ ಅವನ ಮಟ್ಟಿಗೆ ಹೆಚ್ಚು ಬಿಕ್ಕಟ್ಟುಗಳನ್ನು ಸೃಷ್ಟಿಸುತ್ತದೆ.

## ಅವಿಶ್ವಾಸಿಗಳ ಸತ್ಕರ್ಮಗಳು

﴿مَثَلُ مَا يُنفِقُونَ فِي هَٰذِهِ ٱلْحَيَوٰةِ ٱلدُّنْيَا
كَمَثَلِ رِيحٍ فِيهَا صِرٌّ أَصَابَتْ حَرْثَ قَوْمٍ
ظَلَمُوٓا۟ أَنفُسَهُمْ فَأَهْلَكَتْهُ ۚ وَمَا ظَلَمَهُمُ
ٱللَّهُ وَلَٰكِنْ أَنفُسَهُمْ يَظْلِمُونَ ١١٧﴾

"ಅವರು ಇಹಲೋಕದಲ್ಲಿ ಖರ್ಚು ಮಾಡುತ್ತಿರುವುದರ ಉಪಮೆಯು ಹಿಮಮಯ ಗಾಳಿಯಂತೆಯೂ ಅದು ತಮ್ಮ ಮೇಲೆ ತಾವೇ ಅಕ್ರಮವೆಸಗಿದವರ ಹೊಲದ ಮೇಲೆ ಬೀಸಿ ಅದನ್ನು ನಾಶ ಮಾಡಿಬಿಟ್ಟಂತೆಯೂ ಇರುತ್ತದೆ. ಅಲ್ಲಾಹನು ಅವರ ಮೇಲೆ ಅಕ್ರಮವೆಸಗಲಿಲ್ಲ. ವಾಸ್ತವದಲ್ಲಿ ಇವರು ಸ್ವತಃ ತಮ್ಮ ಮೇಲೆ ಅಕ್ರಮವೆಸಗುತ್ತಿದ್ದಾರೆ." (3:117)

ವಿಶ್ವಾಸ ಹಾಗೂ ಪರಲೋಕ ಪ್ರತಿಫಲದ ನಿರೀಕ್ಷೆಯನ್ನಿಟ್ಟುಕೊಳ್ಳದೆ ಸತ್ಯನಿಷೇಧಿಗಳು ಮಾಡುವ ಸತ್ಕರ್ಮ ಮತ್ತು ದಾನಧರ್ಮಗಳು ವ್ಯರ್ಥವಾಗಿ ಹೋಗುವುದೆಂದು ಈ ವಚನದಲ್ಲಿ ಹೇಳಲಾಗಿದೆ. ಅವರು ಹಲವಾರು ಸತ್ಕರ್ಮಗಳನ್ನೆಸಗುತ್ತಾರೆ. ಆದರೆ ಉದ್ದೇಶ ಕೇವಲ ಲೌಕಿಕ ಕಾರ್ಯಗಳು ಮಾತ್ರವಾಗಿರುತ್ತದೆ. ಅವರು ಪರಲೋಕವನ್ನು ನಿಷೇಧಿಸುವುದರಿಂದ ಅಲ್ಲಿ ನಾಳೆ ಲಭಿಸುವ ಅನುಕೂಲತೆಗಳ ಕುರಿತು ಅವರಿಗೆ ಯಾವುದೇ ಚಿಂತೆ ಇರುವುದಿಲ್ಲ.

ಅವರು ಇಹಲೋಕದ ಕೆಲವು ಒಳಿತುಗಳನ್ನು ಮುಂದಿಟ್ಟು ಕಾರ್ಯವೆಸಗುತ್ತಾರೆ. ಒಂದು ಪರಿಧಿಯ ತನಕ ಅದು ಅವರಿಗೆ ಲಾಭವಾಗಿ ಪರಿಣಮಿಸಬಹುದು. ಆದರೆ ಆತ್ಯಂತಿಕವಾದ ಕೊಯ್ಲು ನಡೆಸಬೇಕಾದ ಪರಲೋಕದ ತನಕ ಅವರ ಕೃಷಿ ನೆಲೆನಿಲ್ಲುವುದಿಲ್ಲ. ಮಧ್ಯದಲ್ಲಿಯೇ ಆ ಕೃಷಿ ಹಿಮಗಾಳಿಗೆ ಸಿಲುಕಿ ಕೊಳೆತು ನಾಶವಾಗುತ್ತದೆ.

ಇಲ್ಲಿ ಹೇಳಲಾಗಿರುವ ಕೃಷಿ ಜೀವನದ ಸತ್ಕರ್ಮಗಳಾಗಿವೆ. ಇದರ ಕೊಯ್ಲು ಪರಲೋಕದಲ್ಲಾಗಿದೆ. ಗಾಳಿಯನ್ನು ಜನಕಲ್ಯಾಣ ಪ್ರವೃತ್ತನೆಗಳಿಗಿರುವ ಒಂದು ಪ್ರೇರಕ ಶಕ್ತಿಗೆ ಹೋಲಿಸಬಹುದು. ಕೆಲವು ಪ್ರೇರಣೆಗಳ ಮೂಲಕ ಅದು ಹಲವು ಉತ್ತಮವಾದುದನ್ನು ಮಾಡುವುದಾದರೂ ಸತ್ಯನಿಷೇಧವೆಂಬ ಹಿಮಗಾಳಿ ಬಂದು ಅದನ್ನು ನಾಶಪಡಿಸುತ್ತದೆ.

ಕೃಷಿಯ ಬೆಳವಣಿಗೆಗೆ ಗಾಳಿ ಅಗತ್ಯವಿದೆ. ಅದು ಪ್ರಬಲವಾಗಿ ಬೀಸಿದರೆ ನಾಶವಾಗುತ್ತದೆ. ಪರಲೋಕ ಮೋಕ್ಷಕ್ಕಾಗಿ ಸತ್ಕರ್ಮಗಳು ಅಗತ್ಯ. ಆದರೆ ಲೌಕಿಕ ಗುರಿಯನ್ನಿಟ್ಟುಕೊಂಡು ಅವುಗಳನ್ನು ಮಾಡಿದರೆ ಅದರ ಕೊಯ್ಲನ್ನು ಪರಲೋಕದಲ್ಲಿ ಪಡೆಯಲು ಸಾಧ್ಯವಾಗದು. ಮಧ್ಯದಲ್ಲಿ ಸಂಭವಿಸುವ ಪ್ರಕೃತಿ ದುರಂತಗಳಿಗೆ ಸಿಲುಕಿ ಅವು ನಾಶವಾಗುವುದು.

ಪವಿತ್ರ ಕುರ್‌ಆನ್ ನಿಶ್ಚಯವಾಗಿಯೂ ವಿಶ್ವಾಸವಿಟ್ಟು ಸತ್ಕರ್ಮವೆಸಗುವವರಿಗೆ ಸ್ವರ್ಗವಿದೆಯೆಂದು ಹೇಳತ್ತದೆ. ಪ್ರತಿಯೊಂದು ಕರ್ಮವನ್ನು ಅಲ್ಲಾಹನು ಆ ವ್ಯಕ್ತಿಯ ಮನದಿಂಗಿತಕ್ಕನುಸಾರ ಮೌಲ್ಯಮಾಪನ ಮಾಡುತ್ತಾನೆ. ಕೇವಲ ಲೌಕಿಕ ಲಾಭಗಳನ್ನು ಗುರಿಯಾಗಿಟ್ಟುಕೊಂಡವನಿಗೆ ಅದು ಮಾತ್ರ ಲಭಿಸುತ್ತದೆ. ಆದುದರಿಂದ ಸತ್ಕರ್ಮವೆಸಗುವಾಗ ವಿಶ್ವಾಸ ಮತ್ತು ಪ್ರತಿಫಲದ ಇರಾದೆಯನ್ನಿಟ್ಟುಕೊಂಡಿರಬೇಕು. ಅನ್ಯಥಾ ಅದು ಕೊಯ್ಲು ತೆಗೆಯಲಾಗದ ಕೃಷಿಯಾಗಿ ಮಾರ್ಪಡುತ್ತದೆ.

## ಆಜ್ಞೋಲ್ಲಂಘನೆ ಮತ್ತು ಕೃಷಿನಾಶ

﴿ وَٱضْرِبْ لَهُم مَّثَلًا رَّجُلَيْنِ جَعَلْنَا لِأَحَدِهِمَا جَنَّتَيْنِ مِنْ أَعْنَٰبٍ وَحَفَفْنَٰهُمَا بِنَخْلٍ وَجَعَلْنَا بَيْنَهُمَا زَرْعًا ﴿٣٢﴾ كِلْتَا ٱلْجَنَّتَيْنِ ءَاتَتْ أُكُلَهَا وَلَمْ تَظْلِم مِّنْهُ شَيْـًٔا ۚ وَفَجَّرْنَا خِلَٰلَهُمَا نَهَرًا ﴿٣٣﴾ ﴾

"ಓ ಪ್ರವಾದಿಯವರೇ! ಅವರ ಮುಂದೆ ಒಂದು ಉಪಮೆಯನ್ನಿರಿಸಿರಿ. ಇಬ್ಬರಿದ್ದರು. ಅವರಲ್ಲೊಬ್ಬನಿಗೆ ನಾವು ಎರಡು ದ್ರಾಕ್ಷಿಯ ತೋಟಗಳನ್ನು ಕೊಟ್ಟೆವು. ಅವುಗಳ ಸುತ್ತಲೂ ಖರ್ಜೂರದ ಮರದ ಆವರಣ ಮಾಡಿದೆವು. ಅವುಗಳ ಮಧ್ಯೆ ಕೃಷಿ ಭೂಮಿಯನ್ನಿರಿಸಿದೆವು. ಎರಡೂ ತೋಟಗಳು ತುಂಬಾ ಫಲ ಕೊಡುವುದರಲ್ಲಿ ಏನೂ ಕೊರತೆ ಮಾಡಲಿಲ್ಲ. ಆ ತೋಟಗಳಲ್ಲಿ ನಾವು ಒಂದು ಕಾಲುವೆಯನ್ನು ಹರಿಸಿದೆವು." (18:32–33)

ಇದು ಲೌಕಿಕ ಪಿತ್ತವನ್ನು ನೆತ್ತಿಗೇರಿಸಿಕೊಂಡ ಧನಿಕರು ಹಾಗೂ ಬಡವರಾದ ಸತ್ಯವಿಶ್ವಾಸಿಗಳ ಜೀವನದ ದೃಷ್ಟಿಕೋನ ಮತ್ತು ಅವೆರಡರ ನಡುವಿನ ಪರಸ್ಪರ ವ್ಯತ್ಯಾಸವನ್ನು ತೋರಿಸಿಕೊಡುವ ಒಂದು ಉಪಮೆಯಾಗಿದೆ. ಇದು ಒಂದೇ ಸಮಯದಲ್ಲಿ ಉಪಮೆಯ ವಿವರಣೆ ಹಾಗೂ ಸಂಭವನೀಯ ವೃತ್ತಾಂತದ ವಿವರಣೆಯೂ ಆಗಿದೆ.

ಲೌಕಿಕ ಕೊಡುಗೆಗಳು ಅದೆಷ್ಟು ಕಡಿಮೆಯಾಗಿರಲಿ ಅಥವಾ ಹೆಚ್ಚಾಗಿರಲಿ ಅವೆಲ್ಲವೂ ಸೃಷ್ಟಿಕರ್ತನ ಅನುಗ್ರಹಗಳಾಗಿವೆಯೆಂದು ತಿಳಿಯುವವರು ಹಾಗೂ ಅವೆಲ್ಲವೂ ತಮ್ಮ ಶಕ್ತಿ, ಸಾಮರ್ಥ್ಯ, ಬುದ್ಧಿವಂತಿಕೆಯಿಂದ ಪಡೆದುಕೊಂಡದ್ದೆಂದು ಭಾವಿಸುವವರಿದ್ದಾರೆ.

ಈ ಉದಾಹರಣೆಯಲ್ಲಿ ಸಮೃದ್ಧವಾದ ತೋಟಗಳನ್ನು ಹೊಂದಿದ್ದ ಒಬ್ಬನು ತನ್ನ ಮಿತ್ರನೊಂದಿಗೆ ಅಹಂಕಾರದಿಂದ ಮೈಮರೆತು ಮಾತನಾಡುತ್ತಾನೆ.

"ನಾನು ನಿನಗಿಂತಲೂ ಹೆಚ್ಚಿನ ಸಂಪತ್ತನ್ನು ಮತ್ತು ಜನಬಲವನ್ನು ಹೊಂದಿದ್ದೇನೆ. ಆ ತೋಟಗಳನ್ನು ನಾನು ಸಂರಕ್ಷಿಸುತ್ತಿರುವುದರಿಂದ ಅದು ನಾಶವಾಗುವ ಪ್ರಮೇಯವೇ ಇಲ್ಲ. ಮರಣಾನಂತರವಿರುವ ಪುನರುತ್ಥಾನದಲ್ಲಿ ನನಗೆ ವಿಶ್ವಾಸವಿಲ್ಲ. ಆದರೂ ಹಾಗೆ ವಿಶ್ವಾಸವಿಡುವ ನಿನಗಿಂತಲೂ ಹೆಚ್ಚು ನಾನು ಅನುಗ್ರಹೀತನಾಗಿದ್ದೇನೆ. ಹೀಗಿರುವಾಗ ಪರಲೋಕವೆಂಬುದು ಅಸ್ತಿತ್ವದಲ್ಲಿದ್ದರೂ ಅಲ್ಲಿಯೂ ನಾನೇ ಮುಂಚೂಣಿಯಲ್ಲಿರುತ್ತೇನೆ..." ಅವನ ಧಿಕ್ಕಾರದ ಮಾತುಗಳು ಹೀಗೆ ಮುಂದುವರಿಯುತ್ತದೆ. (ಪವಿತ್ರ ಕುರ್‌ಆನ್ 18:34–43 ನೋಡಿರಿ)

ಆದರೆ ವಿನಯ ಮತ್ತು ವಿಶ್ವಾಸವನ್ನು ಮೈಗೂಡಿಸಿಕೊಂಡ ಅವನ ಗೆಳೆಯ ಅವನನ್ನು ತಿದ್ದಲು ಪ್ರಯತ್ನಿಸುತ್ತಾನೆ. ಕೃತಘ್ನತೆ ಮತ್ತು ಧಿಕ್ಕಾರ ದುಷ್ಪರಿಣಾಮದ ಕುರಿತು ಅವನಿಗೆ ನೆನಪಿಸಿಕೊಡುತ್ತಾನೆ. ಸ್ವಂತ ಅಸ್ತಿತ್ವ ಹಾಗೂ ಸೃಷ್ಟಿಯ ಬಗ್ಗೆ ಮರೆಯದೆ, ಅಹಂಕಾರ ನಿಮಿತ್ತ ಬಹುದೇವವಿಶ್ವಾಸಿಯಾಗಿ ಮಾರ್ಪಡದೆ ಅಲ್ಲಾಹನ ಕುರಿತು ಭಯವಿರಿಸಿಕೊಳ್ಳಬೇಕೆಂದು ಎಚ್ಚರಿಸುತ್ತಾನೆ. ನಿನ್ನ ಸಂಪತ್ತು ನನಗೂ, ನನ್ನ ಬಡತನ ನಿನಗೂ ನೀಡಲು ಸರ್ವಶಕ್ತನಾದ ಅಲ್ಲಾಹನಿಗೆ ಸಾಮರ್ಥ್ಯವಿದೆಯೆಂದು ತಿಳಿಸಿಕೊಡಲು ಪ್ರಯತ್ನಿಸುತ್ತಾನೆ.

ಆದರೆ ಧಿಕ್ಕಾರಿಗಳು ಉಪದೇಶಗಳಿಗೆ ಕಿವಿಗೊಡುವುದಿಲ್ಲ. ಆತ ತನ್ನ ಮನೋಭಾವದಲ್ಲಿ ಯಾವುದೇ ಬದಲಾವಣೆ ಮಾಡಲಿಲ್ಲ. ಕೊನೆಗೆ ಅಲ್ಲಾಹನ ಶಿಕ್ಷೆ ಬಂದೆರಗಿ ಅವನ ತೋಟಗಳು ವಸ್ತುಶಃ ನಾಮಾವಶೇಷವಾಯಿತು. ಯಾರಿಂದಲೂ ಅದನ್ನು ತಡೆಯಲಾಗಲಿಲ್ಲ. ಅವನ ಜನಬಲ ಮತ್ತು ಸಂಪತ್ತು ಯಾವ ಪ್ರಯೋಜನಕ್ಕೂ ಬರಲಿಲ್ಲ. ಆಗ ಅವನಿಗೆ ತನ್ನ ತಪ್ಪಿನ ಅರಿವಾಯಿತು. ನಾನು ನನ್ನ ಪ್ರಭುವನ್ನು ಧಿಕ್ಕರಿಸದಿರುತ್ತಿದ್ದರೆ ಈ ದುರ್ಗತಿ ಬಂದೆರಗುತ್ತಿರಲಿಲ್ಲವೆಂದು ರೋದಿಸುತ್ತಾನೆ.

ಈ ಉದಾಹರಣೆಯ ಮೂಲಕ ಅಲ್ಲಾಹನು ಧಿಕ್ಕಾರಿ ಹಾಗೂ ಅಹಂಕಾರಿಗಳು ಸದಾ ನೆನಪಿಟ್ಟುಕೊಳ್ಳಬೇಕಾದ ಒಂದು ಪಾಠವನ್ನು ಕಲಿಸಿಕೊಡುತ್ತಾನೆ. ನಮ್ಮ ಶಕ್ತಿ ಸಾಮರ್ಥ್ಯ ಅದೆಷ್ಟು ದೊಡ್ಡದಾಗಿದ್ದರೂ ಅದನ್ನು ದಯಪಾಲಿಸಿದವನು ಅಲ್ಲಾಹನೆಂಬ ಪರಮಸತ್ಯವನ್ನು ಮರೆಯಬಾರದು. ಸೃಷ್ಟಿಕರ್ತನ ಬಗ್ಗೆ ನಕರಾತ್ಮಕ ನಿಲುಮೆಯನ್ನಿಟ್ಟುಕೊಂಡವರು ನಾಳೆ ಅದರ ದುಷ್ಪರಿಣಾಮಗಳನ್ನು ಖಂಡಿತ ಅನುಭವಿಸಲಿರುವರು. ಇದರಲ್ಲಿ ಸಂಶಯವೇ ಇಲ್ಲ.

﴿ قُلْ أَنَدْعُوا۟ مِن دُونِ ٱللَّهِ مَا لَا يَنفَعُنَا وَلَا يَضُرُّنَا وَنُرَدُّ عَلَىٰٓ أَعْقَابِنَا بَعْدَ إِذْ هَدَىٰنَا ٱللَّهُ كَٱلَّذِى ٱسْتَهْوَتْهُ ٱلشَّيَٰطِينُ فِى ٱلْأَرْضِ حَيْرَانَ لَهُۥٓ أَصْحَٰبٌ يَدْعُونَهُۥٓ إِلَى ٱلْهُدَى ٱئْتِنَا ۗ قُلْ إِنَّ هُدَى ٱللَّهِ هُوَ ٱلْهُدَىٰ ۖ وَأُمِرْنَا لِنُسْلِمَ لِرَبِّ ٱلْعَٰلَمِينَ ﴿٧١﴾ ﴾

“ಹೇಳಿರಿ. ಅಲ್ಲಾಹನ ಹೊರತು ನಮಗೆ ಉಪಕಾರವಾಗಲಿ ಹಾನಿಯಾಗಲಿ ಮಾಡದ ವಸ್ತುವನ್ನು ಕರೆದು ಪ್ರಾರ್ಥಿಸುವುದೇ? ಅಲ್ಲಾಹು ನಮ್ಮನ್ನು ಸನ್ಮಾರ್ಗದಲ್ಲಿ ಮಾಡಿದ ಬಳಿಕ ನಾವು ಹಿಂದಕ್ಕೆ ಮರಳುವುದೇ? ತನ್ನನ್ನು ನಮ್ಮ ಬಳಿಗೆ ಬಾ ಎಂದು ನೇರಮಾರ್ಗದ ಕಡೆಗೆ ಆಹ್ವಾನಿಸುವ ಕೆಲವು ಸಂಗಡಿಗರು ಆತನಿಗಿದ್ದರೂ ಶೈತಾನರು ದಾರಿಗೆಡಿಸಿಕೊಂಡು ಹೋಗಿ ಭೂಮಿಯಲ್ಲಿ ದಿಗ್ಭ್ರಾಂತನಾಗಿರುವ ಸ್ಥಿತಿಯಲ್ಲಿರುವ ಒಬ್ಬನಂತೆ ನಾವಾಗುವುದೇ? ಹೇಳಿರಿ. ನಿಶ್ಚಯವಾಗಿಯೂ ಅಲ್ಲಾಹನ ನೇರವಾದ ಮಾರ್ಗವೇ ನಿಜವಾದ ಸನ್ಮಾರ್ಗ. ಮತ್ತು ನಾವು ವಿಶ್ವದೊಡೆಯನಿಗೆ ಶರಣಾಗತರಾಗಲು ಆಜ್ಞಾಪಿಸಲ್ಪಟ್ಟವರಾಗಿದ್ದೇವೆ.” (ಅಲ್‌ಅನ್‌ಆಮ್ 71)

ಸತ್ಯವಿಶ್ವಾಸಿಗಳನ್ನು ಅವರ ವಿಶ್ವಾಸದಿಂದ ವಿಮುಖಗೊಳಿಸಿ ಬಹುದೇವವಿಶ್ವಾಸ ಹಾಗೂ ಅರಾಜಕತೆಯೆಡೆಗೆ ಕೊಂಡೊಯ್ಯುವ ಕೆಲವು ವ್ಯಕ್ತಿಗಳ ಕಾರ್ಯಾಚರಣೆಯನ್ನು ಇಲ್ಲಿ ಕುರ್‌ಆನ್ ಕೆಲವು ಪ್ರಶ್ನೆಗಳ ಮೂಲಕ ಪರಾಜಿತಗೊಳಿಸುತ್ತದೆ. ಅಲ್ಲಾಹನು ದಯಪಾಲಿಸಿದ ಹಿದಾಯತ್ತಿನಲ್ಲಿ ಸಂಪೂರ್ಣ ಸಂತೃಪ್ತಿ ಮತ್ತು ಶಾಂತಿಯನ್ನು ಪಡೆದಿರುವ ನಮ್ಮನ್ನು ನೀವು ಉಪಕಾರವಾಗಲಿ ಹಾನಿಯಾಗಲಿ ಮಾಡುವ ಸಾಮರ್ಥ್ಯವಿಲ್ಲದ ಶಕ್ತಿ ಹಾಗೂ ವ್ಯಕ್ತಿಗಳನ್ನು ಆರಾಧಿಸಲು ಆಹ್ವಾನಿಸುತ್ತಿರುವಿರಾ? ನಾವು ಈ ಮಾರ್ಗವನ್ನು ತೊರೆದರೆ ಮರುಭೂಮಿಯಲ್ಲಿ ದಾರಿತಪ್ಪಿ ಆಯಾಸದಿಂದ ಗೊತ್ತುಗುರಿಯಿಲ್ಲದೆ ಭಯದಿಂದ ಅಲೆದಾಡುತ್ತಿರುವವನ ಪರಿಸ್ಥಿತಿ ನಮ್ಮದಾಗಬಹುದು.

ಜಾಹಿಲಿಯ್ಯ ಕಾಲದ ಅರಬಿಗಳಲ್ಲಿ ಶೈತಾನನು ಮರುಭೂಮಿಯಲ್ಲಿ ದಾರಿತಪ್ಪಿಸುತ್ತಾನೆ ಎಂಬ ಸಂಕಲ್ಪ ನೆಲೆನಿಂತಿತ್ತು. ಇದು ನಮ್ಮಲ್ಲಿ ಹಿಂದಿನ ಕಾಲದಲ್ಲಿದ್ದ ಕೊದಿ ತೆಗೆಯುವ ಅಂಧವಿಶ್ವಾಸಕ್ಕೆ ಸಮಾನವಾಗಿದೆ.

ಸತ್ಯವನ್ನು ತಿಳಿದ ಬಳಿಕ ಅದರಿಂದ ವಿಮುಖರಾಗುವವರಿಗೆ ಶಾಂತಿ, ಸಮಾಧಾನ ಮರೀಚಿಕೆಯಾಗುತ್ತದೆ ಎಂದು ಅಲ್ಲಾಹನು ಈ ಉಪಮೆಯ ಮೂಲಕ ತಿಳಿಸಿಕೊಡುತ್ತಾನೆ. ಏಕದೇವವಿಶ್ವಾಸವೆಂಬ ಬಲವಾದ ಪಾಶವನ್ನು ಬಿಟ್ಟವರು ಯಾವುದೇ ಗೊತ್ತುಗುರಿಗಳಿಲ್ಲದೆ ಅಂಡಲೆಯಬೇಕಾಗುತ್ತದೆ. ಇದು ಅವರನ್ನು ವಿನಾಶದೆಡೆಗೆ ಕೊಂಡೊಯ್ಯುತ್ತದೆ.

ಮರುಭೂಮಿಯ ಮರೀಚಿಕೆಯನ್ನು ಕಂಡು ಅದನ್ನು ಬೆನ್ನಟ್ಟಿ ಹೋಗುವವರನ್ನು ಜೊತೆಯಲ್ಲಿರುವವರು ತಡೆದರೂ ಅದರ ಹಿಂದೆ ಹೋದರೆ ತೊಂದರೆಗೆ ಸಿಲುಕಿಕೊಳ್ಳುವಂತೆ ತೌಹೀದನ್ನು ಬಿಟ್ಟವನೂ ವಿನಾಶಕ್ಕೆ ಗುರಿಯಾಗುತ್ತಾನೆ.

﴿ وَٱتۡلُ عَلَيۡهِمۡ نَبَأَ ٱلَّذِيٓ ءَاتَيۡنَٰهُ ءَايَٰتِنَا فَٱنسَلَخَ
مِنۡهَا فَأَتۡبَعَهُ ٱلشَّيۡطَٰنُ فَكَانَ مِنَ ٱلۡغَاوِينَ
١٧٥ وَلَوۡ شِئۡنَا لَرَفَعۡنَٰهُ بِهَا وَلَٰكِنَّهُۥٓ أَخۡلَدَ إِلَى
ٱلۡأَرۡضِ وَٱتَّبَعَ هَوَىٰهُۚ فَمَثَلُهُۥ كَمَثَلِ ٱلۡكَلۡبِ
إِن تَحۡمِلۡ عَلَيۡهِ يَلۡهَثۡ أَوۡ تَتۡرُكۡهُ يَلۡهَثۚ
ذَّٰلِكَ مَثَلُ ٱلۡقَوۡمِ ٱلَّذِينَ كَذَّبُواْ بِـَٔايَٰتِنَاۚ
فَٱقۡصُصِ ٱلۡقَصَصَ لَعَلَّهُمۡ يَتَفَكَّرُونَ ١٧٦ ﴾

“(ಪ್ರವಾದಿಯವರೇ!) ನಾವು ನಮ್ಮ ದೃಷ್ಟಾಂತಗಳ ಜ್ಞಾನವನ್ನು ದಯಪಾಲಿಸಿದ್ದರೂ ಅವುಗಳ ಪಾಲನೆಯಿಂದ ತಪ್ಪಿಸಿಕೊಂಡವನ ವೃತ್ತಾಂತವನ್ನೂ ಅವರ ಮುಂದೆ ವಿವರಿಸಿರಿ. ಕೊನೆಗೆ ಅವನು ಪಥಭ್ರಷ್ಟರಲ್ಲಿ ಸೇರಿ ಹೋಗುವಲ್ಲಿಯವರೆಗೂ ಶೈತಾನನು ಅವನೊಂದಿಗೆ ಸೇರಿಕೊಂಡನು. ನಾವಿಚ್ಛಿಸುತ್ತಿದ್ದರೆ ಆ ದೃಷ್ಟಾಂತಗಳ ಮೂಲಕ ಅವನಿಗೆ ಔನ್ನತ್ಯ ದಯಪಾಲಿಸುತ್ತಿದ್ದೆವು. ಆದರೆ ಅವನು ನೆಲದ ಕಡೆಗೇ ಬಾಗಿಬಿಟ್ಟನು ಮತ್ತು ತನ್ನ ಇಂದ್ರಿಯಾಸಕ್ತಿಗಳನ್ನು ಹಿಂಬಾಲಿಸಿದನು. ಆದುದರಿಂದ ಅವನ ಪರಿಸ್ಥಿತಿಯು ನಾಯಿಯಂತಾಯಿತು. ನೀವು ಅದರ ಮೇಲೆ ದಾಳಿ ನಡೆಸಿದರೂ ಅದು ನಾಲಗೆಯನ್ನು ಹೊರಚಾಚಿಕೊಂಡಿರುವುದು. ಅದನ್ನು ಬಿಟ್ಟುಬಿಟ್ಟರೂ ಅದು ನಾಲಗೆಯನ್ನು ಜೋತಾಡಿಸಿಕೊಂಡಿರುವುದು. ಇದುವೇ ನಮ್ಮ ದೃಷ್ಟಾಂತಗಳನ್ನು ಸುಳ್ಳಾಗಿಸುವವರಿಗೆ ಇರುವ ಉಪಮೆ. ನೀವು ಈ ವೃತ್ತಾಂತವನ್ನು ಇವರಿಗೆ ಹೇಳುತ್ತಿರಿ. ಇವರು ಸ್ವಲ್ಪ ಚಿಂತಿಸಲಿ.” (7:175–176)

ಇಲ್ಲಿ ಸತ್ಯವನ್ನು ಗ್ರಹಿಸುವ ಅನೇಕ ಪುರಾವೆಗಳು ಲಭಿಸಿ ಸನ್ಮಾರ್ಗಕ್ಕೆ ತಲುಪುವ ಅವಕಾಶ ಸಿಕ್ಕಿದರೂ ಇಹಲೋಕದ ತಾತ್ಕಾಲಿಕ ಸುಖಕ್ಕಾಗಿ ಅಹಂಕಾರ, ಸತ್ಯನಿಷೇಧದ ಹಾದಿಗೆ ಹಿಂತಿರುಗುವ ವ್ಯಕ್ತಿಗಳನ್ನು ಉದಾಹರಣೆ ನೀಡಲಾಗಿದೆ. ಇವರು ಶೈತಾನನ ಷಡ್ಯಂತ್ರಕ್ಕೆ ಸಿಲುಕಿ ಪಥಭ್ರಷ್ಟರಾಗುತ್ತಾರೆ.

ಅವರು ಸಹನೆಯಿಂದ ಸತ್ಯದಲ್ಲಿ ಅಚಲರಾಗಿ ನಿಂತಿದ್ದರೆ ಇಹ ಮತ್ತು ಪರದಲ್ಲಿ ಹಲವಾರು ಉನ್ನತ ಪದವಿಗಳನ್ನು ಪಡೆಯುತ್ತಿದ್ದರು. ಸತ್ಯವನ್ನು ಮರೆಮಾಡಿ ಐಹಿಕ ಲಾಭಕ್ಕಾಗಿ ಧಾರ್ಮಿಕ ವಿಧಿ ನೀಡುವವರು, ಸತ್ಯಕ್ಕೆ ವಿರುದ್ಧವಾದ ವ್ಯಾಖ್ಯಾನಗಳನ್ನು ನೀಡಿ ಸತ್ಯವನ್ನು ತಿರುಗು–ಮುರುಗು ಮಾಡುವ ವಿದ್ವಾಂಸರು ಈ

*46 ನೇ ಪುಟಕ್ಕೆ*

# ಕರ್ಮಗಳ ತಳಹದಿ

ಕರ್ಮಶಾಸ್ತ್ರದ ವಿಧಿನಿಷೇಧಗಳು ಒಂದೇ ಬಾರಿಗೆ ಅವತೀರ್ಣಗೊಂಡಿದ್ದರೆ ಅದನ್ನು ಕಾರ್ಯರೂಪಕ್ಕಿಳಿಸುವುದು ಆ ಸಮುದಾಯಕ್ಕೆ ಕಷ್ಟಕರವಾಗಿ ಪರಿಣಮಿಸುತ್ತಿತ್ತು. ಆದರೆ ಕ್ರಮಬದ್ಧವಾದ ಅವತರಣವು ಕರ್ಮಶಾಸ್ತ್ರದ ವಿಧಿನಿಷೇಧಗಳನ್ನು ಜೀವನದ ಭಾಗವಾಗಿ ಮಾಡಿಕೊಳ್ಳಲು ಅವರಿಗೆ ಬಹಳ ಸಹಾಯಕವಾಯಿತು. ಹಂತ ಹಂತವಾಗಿ ಅವತೀರ್ಣಗೊಂಡಂತೆ ಸಂದರ್ಭೋಚಿತವಾಗಿ ಅವತೀರ್ಣಗೊಂಡ ವಿಧಿನಿಷೇಧಗಳನ್ನು ಸೂಕ್ತವಾದ ರೀತಿಯಲ್ಲಿ ಸುಲಭದಲ್ಲಿ ಮೈಗೂಡಿಸಿಕೊಳ್ಳಲು ಅವರಿಗೆ ಸಾಧ್ಯವಾಯಿತು.

ಪ್ರತಿಯೊಂದು ಧರ್ಮವನ್ನು ಬಾಹ್ಯವಾಗಿ ನೋಡಿದಾಗ ಅವುಗಳಲ್ಲಿ ಕೆಲವು ನಿಶ್ಚಿತ ಕರ್ಮಗಳಿರುವುದು ಕಂಡುಬರುತ್ತದೆ. ಹೀಗೆ ಮಾಡುತ್ತಿರುವುದೇಕೆ ಎಂದು ಕೇಳಿದರೆ ಹಲವು ಧರ್ಮೀಯರು ಇದು ನಮ್ಮ ಜನರು ಅನುಸರಿಸುತ್ತಿದ್ದ ರೀತಿಯಾಗಿದೆಯೆಂದು ಉತ್ತರಿಸುತ್ತಾರೆ. ಇಸ್ಲಾಮ್ ಧರ್ಮವನ್ನು ಅರಿತು ಪ್ರಾಯೋಗಿಕವಾಗಿ ಅಳವಡಿಸಿಕೊಂಡವರು ಈ ಪ್ರಶ್ನೆಗೆ “ನಮ್ಮ ಪ್ರಮಾಣಗಳಲ್ಲಿ ಒಂದು ವಿಶ್ವಾಸ ಸಂಹಿತೆ ಮತ್ತು ಅನುಷ್ಠಾನಗಳಿವೆ. ಅದನ್ನು ಅನುಸರಿಸಲು ನಾವು ಆಜ್ಞಾಪಿಸಲ್ಪಟ್ಟಿದ್ದೇವೆ” ಎಂದು ಉತ್ತರಿಸುತ್ತಾರೆ. ಹೀಗಿರುವಾಗ ಪ್ರಮಾಣಗಳು ಎಂದರೇನೆಂದು ಯೋಚಿಸಬೇಕಾದ ಅಗತ್ಯವಿದೆ.

ಫಿಕ್‌ಹ್ ಅಥವಾ ಕರ್ಮಶಾಸ್ತ್ರವು ಇಸ್ಲಾಮೀ ಸಮಾಜದ ಬೆಳವಣಿಗೆಯೊಂದಿಗೆ ಬೆಳೆದ ಒಂದು ಜ್ಞಾನಶಾಖೆಯಾಗಿದೆ. ಒಬ್ಬ ಸತ್ಯವಿಶ್ವಾಸಿಯ ದೈನಂದಿನ ಜೀವನವನ್ನು ಸ್ಪರ್ಶಿಸುವ ಅನುಷ್ಠಾನ ಕರ್ಮಗಳು, ಸ್ವಭಾವ ಸಂಸ್ಕರಣೆ, ವ್ಯವಹಾರಗಳು, ವಿವಾಹ ವಿವಾಹ ವಿಚ್ಛೇದನೆ, ವಾರೀಸು ಹಕ್ಕು ಮುಂತಾದ ಜೀವನದ ಎಲ್ಲಾ ಕ್ಷೇತ್ರಗಳಿಗೆ ಅಗತ್ಯವಾದ ನಿಯಮಸಂಹಿತೆಗಳ ಅಧ್ಯಯನವು ಕರ್ಮಶಾಸ್ತ್ರದ ಬೇಡಿಕೆಯಾಗಿದೆ.

ಪ್ರವಾದಿ(ﷺ) ಯವರು ತಮ್ಮ ಜೀವಂತಕಾಲದಲ್ಲಿಯೇ ಕ್ರಮಬದ್ಧ ಹಾಗೂ ಹಂತ ಹಂತವಾದ ತರಬೇತಿಯಿಂದ ತಮ್ಮ ಅನುಚರರಿಗೆ ಕರ್ಮಶಾಸ್ತ್ರದ ಉಪದೇಶ ನೀಡಿದ್ದರು. ಪವಿತ್ರ ಕುರ್‌ಆನಿನ ಮೂಲಕ ಅವತೀರ್ಣಗೊಂಡ ನಿಯಮಗಳು ಹಾಗೂ ಅವುಗಳನ್ನು ಪ್ರಾಯೋಗಿಕ ಜೀವನದಲ್ಲಿ ಕಲಿಸಿಕೊಟ್ಟ ಪ್ರವಾದಿಯವರ(ﷺ) ಜೀವನಚರ್ಯೆ (ಸುನ್ನತ್) ಈ ಸಮಾಜದ ಸೃಷ್ಟಿಗೆ ಕಾರಣವಾಯಿತು. ಪ್ರವಾದಿ(ﷺ) ಯವರ ಮರಣಾನಂತರ ಮುಸ್ಲಿಮ್ ಸಮುದಾಯಕ್ಕೆ ನಾಯಕತ್ವ ನೀಡಿದ ಖಲೀಫರ ಆಡಳಿತದ ಕಾಲದಲ್ಲಿಯೂ ಪವಿತ್ರ ಕುರ್‌ಆನ್ ಹಾಗೂ ಪ್ರವಾದಿಚರ್ಯೆಯನ್ನು ಆಧಾರವಾಗಿಟ್ಟುಕೊಂಡು ಅವರು ತೀರ್ಪು ನೀಡಿದರು.

ಇಸ್ಲಾಮೀ ಸಾಮ್ರಾಜ್ಯದ ವಿಸ್ತರಣೆ ಹಾಗೂ ನಾಗರಿಕತೆಯ ಬೆಳವಣಿಗೆ ಸೃಷ್ಟಿಸಿದ ಹೊಸ ಹೊಸ ಸಮಸ್ಯೆಗಳಿಗೆ ಪರಿಹಾರ ಸೂಚಿಸುವ ಬಾಧ್ಯತೆಯೂ ಅವರ ಮೇಲಿತ್ತು. ಕುರ್‌ಆನ್ ಮತ್ತು ಪ್ರವಾದಿಚರ್ಯೆಯಲ್ಲಿ ವಿಧಿಗಳನ್ನು ಕಂಡುಹಿಡಿಯಲು ಸಾಧ್ಯವಾಗದ ಸಂದರ್ಭಗಳಲ್ಲಿ ನಡೆಸಿದ ಅಭಿಪ್ರಾಯ ರೂಪೀಕರಣ ಹಾಗೂ ಸಂಶೋಧನೆಯ ಪರಿಣಾಮವಾಗಿ ಇಜ್ಮಾಅ್ ಮತ್ತು ಕಿಯಾಸ್ ಹುಟ್ಟಿಕೊಂಡಿತು. ಅಬೂಬಕ್ಕರ್(ﷺ) ರವರ ಆಡಳಿತ ಕಾಲದಲ್ಲಿ ಸಮಸ್ಯೆಗಳನ್ನು ಯಾವು ರೀತಿ ಬಗೆಹರಿಸಲಾಗುತ್ತಿತ್ತೆಂದು ಮೈಮೂನ್ ಬಿನ್ ಮಹ್ರಾರ್ ಹೀಗೆ ದಾಖಲಿಸುತ್ತಾರೆ.

"ಅಬೂಬಕ್ಕರ್(ﷺ) ರಿಗೆ ಯಾವುದಾದರೂ ವಿಧಿ ಕಂಡುಹಿಡಿಯಬೇಕಾದ ಸಂದರ್ಭದಲ್ಲಿ ಅವರು ಕುರ್‌ಆನಿನ ಮೊರೆ ಹೋಗುತ್ತಿದ್ದರು. ಕುರ್‌ಆನಿನಿಂದ ವಿಧಿ ಕಂಡುಹಿಡಿಯಲು ಅಸಾಧ್ಯವಾದಾಗ ಪ್ರವಾದಿ(ﷺ) ಯವರ ಚರ್ಯೆಯಲ್ಲಿ ಅದನ್ನು ಹುಡುಕುತ್ತಿದ್ದರು. ಅದರಲ್ಲಿಯೂ ಕಂಡುಹಿಡಿಯಲು ಸಾಧ್ಯವಾಗದಿದ್ದಾಗ ಜನರನ್ನು ಒಟ್ಟು ಸೇರಿಸಿ ಸಮಾಲೋಚನೆ ನಡೆಸುತ್ತಿದ್ದರು. ಅವರು ಕೇಳುತ್ತಾರೆ. ನೀವು ಈ ವಿಷಯದಲ್ಲಿ ಪ್ರವಾದಿ(ﷺ) ಯವರಿಂದ ಏನಾದರೂ ಆಲಿಸಿರುವಿರಾ? ಕೆಲವು ಸಂದರ್ಭದಲ್ಲಿ ಜನರು ನಾವು ಈ ವಿಷಯದಲ್ಲಿ ಪ್ರವಾದಿ(ﷺ) ಯವರು ಹೀಗೆ ಹೇಳುವುದನ್ನು ಆಲಿಸಿದ್ದೇವೆ. ಆಗ ಅವರು ಆ ಪ್ರಕಾರ ಕಾರ್ಯವೆಸಗುತ್ತಿದ್ದರು. ಪ್ರವಾದಿ(ﷺ) ಯವರ ನಡವಳಿಕೆಗಳು ಲಭಿಸದಿದ್ದಾಗ ಪ್ರಮುಖರೊಂದಿಗೆ ಸಮಾಲೋಚನೆ ನಡೆಸುತ್ತಿದ್ದರು. ಅವರ ನಡುವೆ ಒಮ್ಮತಾಭಿಪ್ರಾಯ ಮೂಡಿದರೆ ಅದರ ಪ್ರಕಾರ ತೀರ್ಪು ನೀಡುತ್ತಿದ್ದರು." (ಇಅ್‌ಲಾಮುಲ್ ಮುವಕ್ಕಿಈನ್—ಇಬ್ನುಲ್ ಕಯ್ಯಿಮ್)

ಇಜ್ಮಾಅ್ (ಸಹಮತದ ಅಭಿಪ್ರಾಯ) ಎಂಬ ಆಶಯ ರೂಪುಗೊಳ್ಳುವುದು ಹಾಗೂ ಅದರ ಪ್ರಕಾರ ವಿಧಿಗಳನ್ನು ಜಾರಿಗೊಳಿಸುವುದು ಈ ಕಾಲಘಟ್ಟದಲ್ಲಾಗಿದೆ. ಉಮರ್(ﷺ) ರವರ ಆಡಳಿತ ಕಾಲದಲ್ಲಿಯೂ ಈ ಸಂಪ್ರದಾಯ ಪುನರಾವರ್ತಿಸಲ್ಪಟ್ಟಿತು. ವಿವಿಧ ಪ್ರದೇಶಗಳಿಗೆ ಅವರು ಕಳುಹಿಸಿಕೊಟ್ಟ ರಾಜ್ಯಪಾಲರಿಗೆ ಬರೆದ ಪತ್ರಗಳಲ್ಲಿ ಧಾರ್ಮಿಕ ನೇತೃತ್ವ ಹಾಗೂ ಆಡಳಿತ ನಿರ್ವಹಣೆಯ ನಿಟ್ಟಿನಲ್ಲಿ ನೀಡಿದ ಸುವ್ಯಕ್ತ ನಿರ್ದೇಶನಗಳನ್ನು ನೋಡಬಹುದಾಗಿದೆ. ಅವರು ಅಬೂ ಮೂಸಲ್ ಅಶ್‌ಅರಿ(ﷺ) ಯವರಿಗೆ ಬರೆದ ಇತಿಹಾಸ ಪ್ರಸಿದ್ಧ ಪತ್ರದಲ್ಲಿ ಹೀಗೆ ದಾಖಲಿಸಿದ್ದರು.

"ಪವಿತ್ರ ಕುರ್‌ಆನ್ ಮತ್ತು ಸುನ್ನತ್ತಿನಲ್ಲಿ ವಿಧಿ ಕಂಡುಹಿಡಿಯಲು ಅಸಾಧ್ಯವಾದ ಸಮಸ್ಯೆಗಳನ್ನು ನೀವು ಆಳವಾಗಿ ಅಧ್ಯಯನ ಮಾಡಿರಿ. ಅದನ್ನು ಸಮಾನವಾದ ಇತರ ಸಮಸ್ಯೆಗಳೊಂದಿಗೆ ಹೋಲಿಸಿ ತಿಳಿದುಕೊಳ್ಳಿರಿ. ಅನಂತರ ನೀವು ಅಲ್ಲಾಹನಿಗೆ ಅತ್ಯಂತ ಪ್ರಿಯವಾದ ಹಾಗೂ ಅತ್ಯಂತ ಉಚಿತವೆಂದು ತೋಚುವುದನ್ನು ಅವಲಂಬಿಸಿರಿ."

ಕೂಫಾದಲ್ಲಿ ಖಾಝಿಯಾಗಿ ನಿಯುಕ್ತರಾದ ಶುರೈಹ್‌ರವರಿಗೆ ನೀಡಿದ ಸೂಚನೆಗಳು ಪ್ರಸಿದ್ಧವಾಗಿವೆ.

"ಯಾರಿಗೆ ಒಂದು ವಿಷಯದಲ್ಲಿ ಕುರ್‌ಆನಿನಿಂದ ಸ್ಪಷ್ಟವಾದ ವಿಧಿಗಳು ಲಭಿಸಿದರೆ ಅನಂತರ ಯಾರೊಂದಿಗೂ ಅಭಿಪ್ರಾಯ ಕೇಳಬೇಕಾಗಿಲ್ಲ. ಕುರ್‌ಆನಿನಿಂದ ಸ್ಪಷ್ಟತೆ ಲಭಿಸದಿದ್ದರೆ ತಾವು ಪ್ರವಾದಿ(ﷺ) ಯವರ ಚರ್ಯೆಯನ್ನು ಪರಿಶೋಧಿಸಿರಿ. ಸುನ್ನತ್ತಿನಿಂದಲೂ ಲಭಿಸದಿದ್ದರೆ ನೀವು ಇಜ್ತಿಹಾದ್ (ಸಂಶೋಧನೆ) ನಡೆಸಿ ವಿಧಿಯನ್ನು ಕಂಡುಹಿಡಿಯಿರಿ."

ಇವುಗಳು ಕಿಯಾಸ್ ರೂಪುಗೊಳ್ಳುವುದರ ಆಧಾರವಾಗಿ ತೋರಿಸಲಾಗುತ್ತಿರುವ ಘಟನೆಗಳಾಗಿವೆ. ಅನಂತರದ ಕಾಲಾವಧಿಯಲ್ಲಿ ಉಸೂಲಿ ವಿದ್ವಾಂಸರು ಸಹಮತದಿಂದ ಇಜ್ಮಾಅ್ ಮತ್ತು ಕಿಯಾಸ್‌ನ ಪ್ರಾಮಾಣಿಕತೆಯನ್ನು ಅಂಗೀಕರಿಸಿದರು. ಪ್ರಮಾಣಗಳ ಕುರಿತ ಚರ್ಚೆಯಲ್ಲಿ ಕುರ್‌ಆನ್, ಸುನ್ನತ್, ಇಜ್ಮಾಅ್, ಕಿಯಾಸ್ ಎಂಬ ನಾಲ್ಕು ವಿಷಯಗಳು ಒಳಪಡುವುದಾದರೂ ಪ್ರಥಮ ಸ್ಥಾನದಲ್ಲಿ ನಿಲ್ಲುವುದು ಸ್ವತಂತ್ರ ಪ್ರಮಾಣಗಳಾದ ಕುರ್‌ಆನ್ ಮತ್ತು ಸುನ್ನತ್ ಮಾತ್ರವಾಗಿದೆ ಎನ್ನುವುದು ಈ ಲೇಖನದ ತಿರುಳಾಗಿದೆ.

ಪವಿತ್ರ ಕುರ್‌ಆನ್ 23 ವರ್ಷಗಳ ಅವಧಿಯ ವಿವಿಧ ಘಟ್ಟಗಳಲ್ಲಿ ಪ್ರವಾದಿ ಮುಹಮ್ಮದ್(ﷺ) ರಿಗೆ ಅಲ್ಲಾಹನ ವತಿಯಿಂದ ಜಿಬ್ರೀಲ್ ಮೂಲಕ ಅರಬಿ ಭಾಷೆಯಲ್ಲಿ ಅವತೀರ್ಣಗೊಂಡ ದೈವಿಕ ಗ್ರಂಥವಾಗಿದೆ. ಇದರಲ್ಲಿ 13 ವರ್ಷಗಳ ಕಾಲದ ಮಕ್ಕಾ ಜೀವನದಲ್ಲಿ ವಿಶ್ವಾಸಕಾರ್ಯಗಳಿಗೆ ಆದ್ಯತೆ ನೀಡುವ ಹೆಚ್ಚಿನ ವಚನಗಳು ಅವತೀರ್ಣಗೊಂಡಿತು. ಹತ್ತು ವರ್ಷಗಳ ಮದೀನಾ ಜೀವನದಲ್ಲಿ ಕರ್ಮಶಾಸ್ತ್ರದ ವಿಧಿನಿಷೇಧಗಳನ್ನೊಳಗೊಂಡ ಸೂಕ್ತಗಳು ಅವತೀರ್ಣಗೊಂಡಿತು.

ಕುರ್‌ಆನ್ ಅವತೀರ್ಣಗೊಳಿಸಲ್ಪಟ್ಟ ಜನತೆಯಲ್ಲಿ ಹೆಚ್ಚಿನವರು ಅನಕ್ಷರಸ್ಥರಾಗಿದ್ದರು. ಪವಿತ್ರ ಕುರ್‌ಆನಿನ ಹಂತ ಹಂತವಾದ ಅವತೀರ್ಣ ಶೈಲಿ ಹಾಗೂ ಸಂದರ್ಭೋಚಿತವಾದ ಅವತರಣವು ನಿರಕ್ಷರಿಗಳಾಗಿದ್ದ ಅರಬಿಗಳಿಗೆ ಕುರ್‌ಆನ್ ಕಂಠಪಾಠ ಮಾಡಿಕೊಳ್ಳಲು ಮತ್ತು ಅದರ ವಿಧಿನಿಷೇಧಗಳನ್ನು ತಿಳಿದುಕೊಳ್ಳಲು ಹೆಚ್ಚು ಸಹಾಯಕವಾಯಿತು. "ಸತ್ಯನಿಷೇಧಿಗಳು ಇವನ ಮೇಲೆ ಈ ಕುರ್‌ಆನ್ ಏಕಕಾಲದಲ್ಲಿ ಏಕೆ ಅವತೀರ್ಣಗೊಂಡಿಲ್ಲ?" ಎಂದು ಕೇಳುತ್ತಾರೆ. ಇದನ್ನು ನಿಮಗೆ ಸರಿಯಾಗಿ ಮನದಟ್ಟು ಮಾಡಲಿಕ್ಕಾಗಿ ಹೀಗೆ ಮಾಡಲಾಗಿದೆ ಮತ್ತು ಈ ಉದ್ದೇಶಕ್ಕಾಗಿಯೇ ನಾವು ಇದಕ್ಕೆ ಒಂದು ನಿರ್ದಿಷ್ಟ ಕ್ರಮಕ್ಕನುಸಾರ ಬೇರೆ ಬೇರೆ ಭಾಗಗಳ ರೂಪ ಕೊಟ್ಟಿದ್ದೇವೆ.

ಕರ್ಮಶಾಸ್ತ್ರದ ವಿಧಿನಿಷೇಧಗಳು ಒಂದೇ ಬಾರಿಗೆ ಅವತೀರ್ಣಗೊಂಡಿದ್ದರೆ ಅದನ್ನು ಕಾರ್ಯರೂಪಕ್ಕಿಳಿಸುವುದು ಆ ಸಮುದಾಯಕ್ಕೆ ಕಷ್ಟಕರವಾಗಿ ಪರಿಣಮಿಸುತ್ತಿತ್ತು. ಆದರೆ ಕ್ರಮಬದ್ಧವಾದ ಅವತರಣವು ಕರ್ಮಶಾಸ್ತ್ರದ ವಿಧಿನಿಷೇಧಗಳನ್ನು ಜೀವನದ ಭಾಗವಾಗಿ ಮಾಡಿಕೊಳ್ಳಲು ಅವರಿಗೆ ಬಹಳ ಸಹಾಯಕವಾಯಿತು.

ಹಂತ ಹಂತವಾಗಿ ಅವತೀರ್ಣಗೊಂಡಂತೆ ಸಂದರ್ಭೋಚಿತವಾಗಿ ಅವತೀರ್ಣಗೊಂಡ ವಿಧಿನಿಷೇಧಗಳನ್ನು ಸೂಕ್ತವಾದ ರೀತಿಯಲ್ಲಿ ಸುಲಭದಲ್ಲಿ ಮೈಗೂಡಿಸಿಕೊಳ್ಳಲು ಅವರಿಗೆ ಸಾಧ್ಯವಾಯಿತು.

ಕುರ್‌ಆನಿನ ಪ್ರತಿಪಾದನಾ ಶೈಲಿ ಹಾಗೂ ಸೌಂದರ್ಯವು ಅವರನ್ನು ಇನ್ನಷ್ಟು ಆಕರ್ಷಿಸಿತು. ವಿಧಿಗಳ ಅವತರಣದಲ್ಲಿ ಕೆಲವು ಸಾಮಾನ್ಯ ಸ್ವರೂಪವನ್ನು ನಾವು ನೋಡಬಹುದಾಗಿದೆ. ಸಹಾಬಿಗಳು ತಮ್ಮ ಮನಸ್ಸಿನಲ್ಲಿ ಉದ್ಭವಿಸಿದ ಒಂದು ಸಮಸ್ಯೆಯನ್ನು ಪ್ರವಾದಿ(ﷺ) ಯವರ ಮುಂದಿಟ್ಟಾಗ ಕೆಲವು ವಚನಗಳು ಅದಕ್ಕೆ ಉತ್ತರವಾಗಿ ಅವತೀರ್ಣಗೊಂಡಿತು.

ಅವರು ನಿಮ್ಮೊಂದಿಗೆ ಕೇಳುತ್ತಾರೆ, ಅವರು ತಮ್ಮೊಂದಿಗೆ ವಿಧಿಯನ್ನು ಅರಸುತ್ತಾರೆ ಮುಂತಾದ ಮುನ್ನುಡಿಯೊಂದಿಗೆ ಅವತೀರ್ಣಗೊಂಡ ಆಯತ್‌ಗಳು ಇದಕ್ಕೆ ಉದಾಹರಣೆಯಾಗಿವೆ. ಕೆಲವು ವಿಧಿಗಳು ಪ್ರಶ್ನೋತ್ತರ ರೂಪದಲ್ಲಿದ್ದುದರಿಂದ ನಿರಕ್ಷರಿಗಳಾದ ಅರಬಿಗಳಿಗೆ ಅದನ್ನು ಅಳವಡಿಸಿಕೊಳ್ಳಲು ಕಷ್ಟವಾಗಲಿಲ್ಲ.

ಇನ್ನು ಕೆಲವೊಮ್ಮೆ ಒಂದು ಸೂಕ್ತದ ಅವತೀರ್ಣವು ಅವರಲ್ಲಿದ್ದ ಸಂಶಯವನ್ನು ನಿವಾರಿಸುವ ವಿಧದಲ್ಲಿರುತ್ತಿತ್ತು. ಇದ್ಯಾವುದೂ ಇರದ ಸಾಮಾನ್ಯ ಸಂದರ್ಭಗಳಲ್ಲಿಯೂ ವಿಧಿಗಳು ಅವತೀರ್ಣಗೊಂಡಿವೆ. ಪವಿತ್ರ ಕುರ್‌ಆನಿನ ಈ ಅವತರಣ ಶೈಲಿ ಅದನ್ನು ಕಂಠಪಾಠ ಮಾಡಿಕೊಳ್ಳಲು ಹಾಗೂ ಪ್ರಾಯೋಗಿಕವಾಗಿ ಜೀವನದಲ್ಲಿ ಅಳವಡಿಸಿಕೊಳ್ಳಲು ಸಹಾಯಕವಾಗಿ ಪರಿಣಮಿಸಿದ ಘಟಕವಾಗಿದೆ. ■

*43 ನೇ ಪುಟದಿಂದ*

## ಮಹಾತ್ಮರೊಂದಿಗೆ ಏಕೆ ಪ್ರಾರ್ಥಿಸಬಾರದು?

ಆಯತ್ತಿನ ಆಶಯದಲ್ಲಿ ಒಳಪಡುತ್ತಾರೆ.

ಇವರನ್ನು ಅಲ್ಲಾಹನು ಸದಾ ಸಮಯ ನಾಲಗೆಯನ್ನು ಹೊರಚಾಚಿಕೊಂಡಿರುವ ನಾಯಿಯೊಂದಿಗೆ ಹೋಲಿಸುತ್ತಾನೆ. ಅದಕ್ಕಿರುವ ಏಕೈಕ ಉದ್ದೇಶವೆಂದರೆ ಸುಖ–ಭೋಗಗಳು ಮಾತ್ರವಾಗಿದೆ. ದುರಾಸೆಯು ಅದರ ಗುಣವಾಗಿದೆ. ಒಂದು ಎಲುಬಿನ ತುಂಡು ಸಿಕ್ಕಿದರೆ ಸಾಕು, ಅದನ್ನು ನೆಕ್ಕುತ್ತಲೂ, ಕಚ್ಚುತ್ತಲೂ ಇರುತ್ತದೆ.

ಎಲ್ಲಿ ಏನಾದರೂ ಸಿಗಬಹುದೇ ಎಂದು ಸದಾ ತಲೆ ಕೆಳಗೆ ಹಾಕಿ ನಾಲಗೆಯನ್ನು ಜೋತು ಬಿಟ್ಟು ವಾಸನೆ ಮೂಸುತ್ತಾ ಓಡುತ್ತಿರುವುದು ನಾಯಿಯ ಸ್ವಭಾವ. ಎಲುಬಿನ ತುಂಡಿಗಾಗಿ ಧರ್ಮ ಮತ್ತು ಅದು ಪ್ರತಿಪಾದಿಸುವ ನೈತಿಕ ಮೇರೆಯನ್ನು ಮೀರಿ ನಿರಂತರ ಕಾರ್ಯವೆಸಗುವವನನ್ನು ಅಲ್ಲಾಹನು ನಾಯಿಗೆ ಹೋಲಿಸಿದ್ದಾನೆ. ಈಮಾನ್ ಮತ್ತು ಜ್ಞಾನದ ಹಗ್ಗವನ್ನು ಬಿಚ್ಚಿ ದೇಹೇಚ್ಛೆಗಳ ನಿಯಂತ್ರಣಕ್ಕೊಪ್ಪಿಸುವವನ ಸ್ಥಿತಿಯೂ ನಾಯಿಯಂತೆ. ■

*17 ನೇ ಪುಟದಿಂದ*

## ಮಹಾತ್ಮರೊಂದಿಗೆ ಏಕೆ ಪ್ರಾರ್ಥಿಸಬಾರದು?

ನೀಡುವುದು, ಅದನ್ನು ಗುಣಪಡಿಸುವುದು ಎಲ್ಲ ಅವನೇ! ಹೀಗಿರುವಾಗ ನಾವು ಅವನನ್ನು ಬಿಟ್ಟು ಬೇರೆಯವರಲ್ಲಿ ಏಕೆ ಪ್ರಾರ್ಥಿಸಬೇಕು. ಅಲ್ಲಾಹನಲ್ಲಿ ಪ್ರಾರ್ಥಿಸದಿರಲು ಅವನಿಗಿರುವ ಕೊರತೆಯಾದರೂ ಏನು?"

ಆಕೆ ಮೌನವಾಗಿದ್ದಳು.

"ನಾವು ಇಲ್ಲಿಗೆ ಬಂದಿರುವುದು ನಮ್ಮ ಕರ್ತವ್ಯವನ್ನು ನಿರ್ವಹಿಸಲು. ನಾಳೆ ಅಲ್ಲಾಹನ ಮುಂದೆ ಅಪರಾಧಿ ಸ್ಥಾನದಲ್ಲಿ ನಿಲ್ಲಲು ನಮ್ಮಿಂದ ಸಾಧ್ಯವಿಲ್ಲ. ಕೆಲವು ವಿಷಯಗಳನ್ನು ಹೇಳಿದ್ದೇನೆ. ಸರಿಯೆಂದು ಕಂಡರೆ ಸ್ವೀಕರಿಸಿ. ಇಲ್ಲದಿದ್ದರೆ ಬಿಟ್ಟುಬಿಡಿ. ಅಧಿಕಪ್ರಸಂಗವಾಗಿದ್ದರೆ ದಯವಿಟ್ಟು ಕ್ಷಮಿಸಿ." ನಾವು ಎದ್ದು ನಿಂತೆವು.

ಆಗ ಆ ಮಹಿಳೆ ನಮಗೆ ಆಶ್ಚರ್ಯವಾಗುವಂತೆ ತಕ್ಷಣ ಟಿ.ವಿಯ ಮೇಲಿರುವ ವಿಗ್ರಹ ಮತ್ತು ಗೋಡೆಗೆ ಅಂಟಿಸಿದ್ದ ದರ್ಗಾದ ಚಿತ್ರಗಳನ್ನು ಅಲ್ಲಿಂದ ತೆರವುಗೊಳಿಸಿದರು. ಆ ಬಳಿಕ, "ನೀವು ವಿವರಿಸಿಕೊಟ್ಟ ಕಾರ್ಯಗಳಲ್ಲಿ ತಿರುಳಿದೆಯೆಂದು ನನಗೆ ಭಾಸವಾಗುತ್ತಿದೆ. ತಪ್ಪುಗಳನ್ನು ತಿದ್ದಿರುವುದಕ್ಕೆ ಧನ್ಯವಾದಗಳು. ನಾನು ಧರ್ಮದ ವಿಷಯ ಹೆಚ್ಚಾಗಿ ಕಲಿಯಲಿಲ್ಲ. ನನಗೆ ತಿಳಿದ ಮಟ್ಟಿಗೆ ನಾನು ಅವರಿಗೆ ವಿಷಯವನ್ನು ಮನವರಿಕೆ ಮಾಡಿಕೊಡುತ್ತೇನೆ..."

ಹೆಚ್ಚಿನ ಅಧ್ಯಯನಕ್ಕಾಗಿ ಕರಪತ್ರ ಮತ್ತು ಸಿ.ಡಿ.ಗಳನ್ನು ಕೊಟ್ಟು ನಾವು ಅಲ್ಲಿಂದ ನಿರ್ಗಮಿಸಿದಾಗ ಮನಸ್ಸು ಬಹಳ ಸಂತೃಪ್ತವಾಗಿತ್ತು. ■

# ಜಿಪುಣನ ಅಂತ್ಯ

ಬಸ್ರಾದಲ್ಲಿ ದಹ್ಲಾನ್ ಎಂಬ ಒಬ್ಬ ದೊಡ್ಡ ಶ್ರೀಮಂತನಿದ್ದ. ಧಾರಾಳ ಸಂಪತ್ತಿದ್ದು ಪ್ರಯೋಜನವೇನು? ಅವನು ಮಹಾ ಜಿಪುಣ! ಯಾರಿಗೂ ಯಾವ ಉಪಕಾರವನ್ನೂ ಮಾಡದವನು. ಅವನಿಗೆ ಬಡ ಸಹೋದರರಿದ್ದರು. ಆದರೂ ದಹ್ಲಾನ್ ಅವರಿಗೆ ಕರುಣೆ ತೋರಿಸುತ್ತಿರಲಿಲ್ಲ. ವಿವಾಹವಾದರೆ ಪತ್ನಿಗೆ ಖರ್ಚು ಮಾಡಬೇಕಾಗುತ್ತದೆ. ಮಕ್ಕಳಾದರೆ ನಂತರ ಹೇಳಬೇಕಾಗಿಲ್ಲ. ಖರ್ಚಿನ ಮೇಲೆ ಖರ್ಚು...! ಅವನು ಅವಿವಾಹಿತನಾಗಿಯೇ ಉಳಿದ. ಸದಾ ಕಾಲ ಹೆಚ್ಚು ಹಣ ಸಂಪಾದಿಸುವುದು ಹೇಗೆ ಎಂಬುದನ್ನೇ ಅವನು ಚಿಂತಿಸುತ್ತಿದ್ದ.

ಹೀಗಿರುವಾಗ ಒಂದು ದಿನ ದಹ್ಲಾನ್ ಒಂದು ಯಾತ್ರೆಯಿಂದ ಮರಳುತ್ತಿದ್ದ. ಸಮಯ ರಾತ್ರಿಯಾಗಿತ್ತು. ಬೆಳದಿಂಗಳ ಬೆಳಕಿನಲ್ಲಿ ಅವನು ನದಿ ತೀರದಲ್ಲಿ ನಡೆಯುತ್ತಿದ್ದ. ನಾನು ಸಂಪಾದಿಸಿದ ಹಣ ಬಹಳ ಕಡಿಮೆಯಾಗಿದೆ. ಇನ್ನೂ ಧಾರಾಳ ಸಂಪಾದಿಸಬೇಕು. ಊರಿನ ಅತಿ ದೊಡ್ಡ ಶ್ರೀಮಂತನಾಗಿ ಮೇಲೆ ಬರಬೇಕು. ಅದಕ್ಕಿರುವ ಸುಲಭದ ಮಾರ್ಗ ಯಾವುದು? ಆಗಲೂ ಅವನ ಮನಸ್ಸಿನಲ್ಲಿದ್ದ ಏಕೈಕ ಚಿಂತೆ ಇದಾಗಿತ್ತು.

ಸ್ವಲ್ಪ ದೂರ ನಡೆದಾಗ ಕಾಲಿಗೆ ಏನೋ ತಾಗಿದಂತಾಯಿತು. ನೋಡಿದಾಗ ಅದೊಂದು ಗೋಣಿ ಚೀಲ. ಅದನ್ನು ಅಲುಗಾಡಿಸಿದಾಗ ಅದರಲ್ಲಿರುವುದು ಕಲ್ಲುಗಳೆಂದು ದಹ್ಲಾನ್ ತಿಳಿದುಕೊಂಡ. ಅವನು ಆ ಗೋಣಿಯನ್ನು ಎತ್ತಿ ಹೆಗಲಿಗೇರಿಸಿದ. ನಾಯಿ ಮುಂತಾದ ಪ್ರಾಣಿಗಳು ಕಚ್ಚಲು ಬಂದರೆ ಅದರಿಂದ ಕಲ್ಲುಗಳನ್ನು ಎಸೆದು ಓಡಿಸಬಹುದು, ಆತ ಯೋಚಿಸಿದ. ನಡೆಯುತ್ತಿರುವುದು ನದಿ ತೀರದಲ್ಲಿ, ಅವನು ಗೋಣಿಯಿಂದ ಒಂದು ಕಲ್ಲನ್ನು ತೆಗೆದು ನದಿಗೆಸೆದ. ಕಲ್ಲು 'ಗ್ಲುಂ' ಎಂಬ ಶಬ್ದದೊಂದಿಗೆ ನೀರಿಗೆ ಬಿತ್ತು.

ಅದು ಅವನಿಗೆ ತಮಾಷೆಯಾಗಿ ಕಂಡಿತು. ಆತ ಪುನಃ ಕಲ್ಲುಗಳನ್ನೆಸೆದ. ಹೀಗೆ ನದಿಯ ಸಮೀಪದಲ್ಲಿರುವ ಮನೆಗೆ ತಲುಪುವ ತನಕ ಗೋಣಿಚೀಲದಲ್ಲಿದ್ದ ಕಲ್ಲುಗಳನ್ನೆಲ್ಲಾ ಎಸೆದ. ಮನೆ ತಲುಪಿದಾಗ ಗೋಣಿಯಲ್ಲಿ ಒಂದು ಕಲ್ಲು ಮಾತ್ರ ಬಾಕಿಯಾಗಿತ್ತು. ಅದನ್ನು ದೂರಕ್ಕೆ ಎಸೆದುಬಿಡಬೇಕೆಂದು ಗೋಣಿಯಿಂದ ಹೊರತೆಗೆದ. ಆದರೆ ಅವನು ಅದನ್ನು ಬೆಳಕಿನ ಪ್ರಕಾಶದಲ್ಲಿ

ನೋಡಿದಾಗ ತಲ್ಲಣಿಸಿ ಹೋದ. ಅದೊಂದು ಚಿನ್ನದ ಗಟ್ಟಿಯಾಗಿತ್ತು! ತಾನು ಇದುವರೆಗೆ ನದಿಗೆ ಎಸೆದದ್ದು ಚಿನ್ನವಾಗಿತ್ತು ಎಂಬ ಸತ್ಯ ಅರಿತು ದಹ್ಲಾನ್ ಕಂಗಾಲಾದ. ಅವನು ಪ್ರಜ್ಞೆ ತಪ್ಪಿ ಬಿದ್ದ.

ಮರುದಿನ ಬೆಳಗ್ಗೆ ಎದ್ದು ದಹ್ಲಾನ್ ನದಿಯ ಬಳಿಗೆ ಹೋದ. ನಾನು ನಿನ್ನೆ ಯಾವ ಸ್ಥಳಗಳಲ್ಲಿ ಕಲ್ಲುಗಳನ್ನು ಎಸೆದಿದ್ದೆ? ಯಾವ ನೆನಪೂ ಇಲ್ಲ. ಆದರೂ ಅವನು ಆಸೆಯಿಂದ ನದಿಯಲ್ಲಿ ಮುಳುಗಿದ. ಈಜುತ್ತಾ ಅನೇಕ ಕಡೆ ಹುಡುಕಿದರೂ ಒಂದೇ ಒಂದು ಗಟ್ಟಿ ಪತ್ತೆಯಾಗಲಿಲ್ಲ. ಸಂಜೆಯಾಗುವ ಹೊತ್ತಿಗೆ ದಣಿದ ಅವನು ನದಿಯಿಂದ ಹೊರಬಂದು ಒಂದು ಮರದ ಬುಡದಲ್ಲಿ ವಿಶ್ರಮಿಸಿದ. ಆಗ ಆ ದಾರಿಯಲ್ಲಿ ಅಬೂ ಯೂಸುಫ್ ಎಂಬ ವಿದ್ವಾಂಸರ ಆಗಮನವಾಗುತ್ತದೆ.

ಆಯಾಸದಿಂದ ಕೂತಿರುವ ದಹ್ಲಾನ್‌ನೊಡನೆ ಅಬೂ ಯೂಸುಫ್ ವಿಷಯಗಳನ್ನು ಕೇಳಿ ತಿಳಿದುಕೊಳ್ಳುತ್ತಾರೆ. ಎಲ್ಲವನ್ನೂ ಕೇಳಿದ ಬಳಿಕ ಅಬೂ ಯೂಸುಫ್ ಹೇಳುತ್ತಾರೆ.

"ನೋಡು ದಹ್ಲಾನ್! ಅಲ್ಲಾಹು ನಿನಗೆ ಧಾರಾಳ ಸಂಪತ್ತನ್ನು ದಯಪಾಲಿಸಿದ್ದಾನೆ. ಅದನ್ನು ನೀನು ಪ್ರಯೋಜನಕಾರಿಯಾದ ಮಾರ್ಗದಲ್ಲಿ ವೆಚ್ಚ ಮಾಡುತ್ತಿಲ್ಲ. ನೀನು ಜಿಪುಣತನದಿಂದ ಎಲ್ಲವನ್ನೂ ಕೂಡಿಟ್ಟಿರುವಿ. ನೀನು ಒಂದಿನ ಅಲ್ಲಾಹನ ಕಡೆಗೆ ಮರಳಿ ಹೋಗಲೇ ಬೇಕಾಗಿದೆ. ನಿನ್ನಲ್ಲಿರುವ ಯಾವುದನ್ನೂ ನೀನು ನಿನ್ನ ಜೊತೆಯಲ್ಲಿ ಕೊಂಡೊಯ್ಯಲಾಗದು. ಅವೆಲ್ಲವೂ ನಿನಗೆ ನಷ್ಟವಾಗುತ್ತದೆ. ಆದರೆ ನೀನು ಅದನ್ನು ಅಲ್ಲಾಹನ ಮಾರ್ಗದಲ್ಲಿ ವೆಚ್ಚ ಮಾಡಿದರೆ ಅದು ನಿನಗೆ ಪ್ರಯೋಜನ ನೀಡುತ್ತದೆ. ಅನ್ಯಥಾ ಏನೆಂದು ತಿಳಿಯದೆ ನೀನು ನದಿಗೆಸೆದ ಚಿನ್ನದ ಗಟ್ಟಿಗಳಂತೆ ನಿನ್ನ ವಶದಲ್ಲಿರುವ ಸಂಪತ್ತಿನ ಬೆಲೆಯನ್ನು ನೀನು ಅರಿಯಲಾರೆ."

ಈ ಮಾತು ದಹ್ಲಾನ್‌ನನ್ನು ಯೋಚಿಸುವಂತೆ ಮಾಡಿತು. ಅವನಿಗೆ ತನ್ನ ತಪ್ಪು ಮನವರಿಕೆಯಾಯಿತು. ಅಂದಿನಿಂದ ಅವನು ತನ್ನ ಸಂಪತ್ತನ್ನು ಒಳಿತಿನ ಮಾರ್ಗದಲ್ಲಿ ಖರ್ಚು ಮಾಡಲು ಆರಂಭಿಸಿದ. ವಿವಾಹವಾಗಿ ಪತ್ನಿಯೊಡನೆ ಜೀವಿಸಲು ತೀರ್ಮಾನಿಸಿದ. ಅದರೊಂದಿಗೆ ಅವನ ಜಿಪುಣತನ ಮತ್ತು ಸಂಪತ್ತಿನೊಂದಿಗಿರುವ ವ್ಯಾಮೋಹ ಕೊನೆಗೊಂಡಿತು. ಸಹೋದರರು, ಬಡವರು ಮತ್ತು ಊರಿನವರಿಗೆ ಉದಾರವಾಗಿ ಸಹಾಯ ಮಾಡುವ ವ್ಯಕ್ತಿಯಾಗಿ ದಹ್ಲಾನ್ ಮಾರ್ಪಟ್ಟ.

---

*28 ನೇ ಪುಟದಿಂದ*

## ಗೈಬ್—ವಿಶ್ವಾಸದ ಕೀಲಿಕೈ

ತೊರೆಯುತ್ತಾರೆ. ಇಚ್ಛಾಸಫಲತೆಗಾಗಿ ಅಲ್ಲಾಹನನ್ನು ಮಾತ್ರ ಆಶ್ರಯಿಸುವವರಾಗಿ ಮಾರ್ಪಡುತ್ತಾರೆ. ಈ ರೀತಿಯಲ್ಲಿ ಅವರು ನೈಜ ಏಕದೇವವಿಶ್ವಾಸಿಗಳಾಗಿ ಪರಿವರ್ತನೆಯಾಗುತ್ತಾರೆ.

ಆದುದರಿಂದಲೇ ಪುರೋಹಿತರು ಜನಸಾಮಾನ್ಯರನ್ನು ತಮ್ಮ ವಶದಲ್ಲಿಟ್ಟುಕೊಳ್ಳಲು ಮಹಾತ್ಮರಿಗೆ ಅಗೋಚರ ಜ್ಞಾನವಿದೆಯೆಂದು ಬಿಂಬಿಸಲು ಹಲವಾರು ಕಟ್ಟುಕಥೆಗಳನ್ನು ಹೆಣೆಯುತ್ತಾರೆ. ಇಂತಹ ಸಂದರ್ಭಗಳಲ್ಲಿ ಸತ್ಯವಿಶ್ವಾಸಿಗಳು ಜಾಗೃತರಾಗಿ ಶಿರ್ಕಿನ ವಕ್ತಾರರನ್ನು ಹಿಮ್ಮೆಟ್ಟಿಸಲು ಸ್ವಲ್ಪವೂ ಅಳುಕಬಾರದು. ಇಸ್ಲಾಮೀ ಪ್ರಮಾಣಗಳನ್ನು ಆಧಾರವಾಗಿಟ್ಟುಕೊಂಡು ಮಾಡುವ ಹೋರಾಟದಿಂದ ಶಿರ್ಕ್ ಅಳಿಯುವುದರಲ್ಲಿ ಸಂಶಯವೇ ಇಲ್ಲ. ನಮ್ಮ ಎಲ್ಲಾ ಪರಿಶ್ರಮಗಳು ಆತ್ಯಂತಿಕ ವಿಜಯದಲ್ಲಿ ಕೇಂದ್ರೀಕರಿಸಲ್ಪಟ್ಟಿರಬೇಕು. ಅಲ್ಲಾಹನು ಅನುಗ್ರಹಿಸಲಿ. ■